KA / BG-GPO / 2515 / WPP-47 / 2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೦೨, ೨೦೦೬ (ಫಾಲ್ಗುಣ ೧೧, ಶಕ ವರ್ಷ ೧೯೨೭) | ಸಂಚಿಕೆ ೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಸಮಾಜ ಕಲ್ಯಾಣ ಇಲಾಖೆಯ ಪರಿಶಿಷ್ಟ ಜಾತಿ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಭೋಜನಾ ವೆಚ್ಚ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸಕಇ: 175 : ಬಿಎಂಎಸ್ : 2005, ದಿನಾಂಕ: 07.11.2005.

2) ದಿನಾಂಕ: 02.12.2005ರಂದು ನಡೆದ ಅಧಿಕಾರ ಯುತ್ತ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಪರಿಶಿಷ್ಟ ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿನ ಭೋಜನಾ ವೆಚ್ಚವನ್ನು ಮಾಹೆಯಾನ ಪ್ರತಿ ವಿದ್ಯಾರ್ಥಿಗೆ ರೂ. 450 ರಿಂದ 500 ರೂಪಾಯಿಗಳಿಗೆ ಹೆಚ್ಚಿಸಲಾಗಿದೆ. ದಿನಾಂಕ: 02.12.2005 ರ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಇವರು ದಿನಾಂಕ: 07.11.2005ರ ಆದೇಶದಲ್ಲಿ ಪರಿಶಿಷ್ಟ ವರ್ಗಗಳ ವಿದ್ಯಾರ್ಥಿ ನಿಲಯಗಳಲ್ಲಿನ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗಾಗಿ ಮಾತ್ರ ಭೋಜನಾ ವೆಚ್ಚ ಹೆಚ್ಚಿಸಲು ಆದೇಶ ಪಡೆದಿದ್ದು, ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಲಯಗಳಲ್ಲಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಭೋಜನಾ ವೆಚ್ಚ ಹೆಚ್ಚಿಸಲು ಆದೇಶ ಪಡೆದಿಲ್ಲವೆಂದು ತಿಳಿಸಿ, ಪರಿಶಿಷ್ಟ ಜಾತಿ ವಿದ್ಯಾರ್ಥಿನಿಲಯಗಳಲ್ಲಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಭೋಜನಾ ವೆಚ್ಚವನ್ನು ರೂ. 450 ರಿಂದ ರೂ. 500 ಕ್ಕೆ ಹೆಚ್ಚಿಸಲು ಕೋರಿದರು. ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ಆಯಾಯ ಇಲಾಖೆಯೇ ಅಂದರೆ, ಸಮಾಜ ಕಲ್ಯಾಣ ಇಲಾಖೆ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಗಳೇ ವೆಚ್ಚವನ್ನು ಭರಿಸಬೇಕೆಂದು ಪರಿಗಣಿಸಲಾಗಿದೆ. ಈ ಕಾರಣಗಳಿಂದ ಪರಿಶಿಷ್ಟ ಜಾತಿ ವಿದ್ಯಾರ್ಥಿನಿಲಯಗಳಲ್ಲಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯು ಭರಿಸಬೇಕೆಂದು ನಿರ್ಧರಿಸಿ ಭೋಜನಾ ವೆಚ್ಚವನ್ನು ಪರಿಷ್ಕರಿಸಲು ತೀರ್ಮಾನಿಸಲಾಯಿತು.

**ಸರ್ಕಾರದ ಆದೇಶ ಸಂಖ್ಯೆ: ಸಕಇ : 461 : ಪವಯೋ : 2005, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2005**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಸಮಾಜ ಕಲ್ಯಾಣ ಇಲಾಖೆಯ ಸರ್ಕಾರಿ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ. 450 ರಿಂದ ರೂ. 500 ಕ್ಕೆ ಹೆಚ್ಚಿಸಿ ಆದೇಶಿಸಿದೆ. ಈ ಹೆಚ್ಚಳವು 01.12.2005 ರಿಂದ ಜಾರಿಗೆ ಬರಲಿದೆ.

ಇದಕ್ಕೆ ತಗಲುವ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ಸಕಇ : 47 : ಎಸ್ಎಲ್‌ಪಿ : 2005 ದಿನಾಂಕ: 28.05.2005 ರಲ್ಲಿ 2005-06ನೇ ಸಾಲಿನಲ್ಲಿ ಕ್ರೋಢಿಕರಿಸಿದ ಮೊತ್ತದಲ್ಲಿ ನಿಗಧಿಪಡಿಸಿದ ರೂ. 70.00 ಲಕ್ಷಗಳಲ್ಲಿ ಉಳಿತಾಯವಾಗುವ ಮೊತ್ತದಲ್ಲಿ ಭರಿಸುವುದು.

ಈ ಆದೇಶವನ್ನು ಅಧಿಕಾರಯುಕ್ತ ಸಮಿತಿಯು ತನ್ನ ನಡವಳಿ ದಿನಾಂಕ: 02.12.2005 ರಂದು ನೀಡಿದ ಅನುಮೋದನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 154

**ಎಂ. ಪ್ರಾಣದೇವ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಹಾನಗಲ್ ಮತ್ತು ಶ್ರೀ ಎನ್.ಎಫ್. ಗಟ್ಟಿಮನಿ, ಪ್ರಥಮ ದರ್ಜೆ ಸಹಾಯಕರು, ಇವರುಗಳ ವಿರುದ್ಧದ ಲೋಕಾಯುಕ್ತ ಪ್ರಕರಣ - ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಸಂ: Compt / uplok / B.G.M.-232 / 2003 / pp, ದಿ: 16.09.05.

**ಪ್ರಸ್ತಾವನೆ:**

ಹಾವೇರಿ ಜಿಲ್ಲೆ, ಹಾನಗಲ್ ತಾಲ್ಲೂಕಿನ ಹಿಂದಿನ ತಹಶೀಲ್ದಾರ್‌ರಾದ ಶ್ರೀ ಆರ್.ಜಿ. ಪಾಲ್ಕರ್ ಮತ್ತು ಶ್ರೀ ಎನ್.ಎಫ್. ಗಟ್ಟಿಮನಿ, ಇವರುಗಳು ಹಾನಗಲ್ ತಾಲ್ಲೂಕು, ಸಮ್ಮನಗಿ ಗ್ರಾಮದಲ್ಲಿರುವ ಫಿರ್ಯಾದುದಾರರಾದ ಶ್ರೀ ಬಸವರಾಜ್ ಎಂಬುವವರ ಜಮೀನು ಸ.ನಂ. 61 ಮತ್ತು 62ರ 2.02 ಎಕರೆ ಭೂಮಿಯನ್ನು ಕೃಷಿ ಭೂಮಿಯಿಂದ ಕೃಷಿಯೇತರ ಭೂಮಿಯನ್ನಾಗಿ ಪರಿವರ್ತಿಸಲು ಲಂಚ ಪಡೆದಿರುವ ಬಗ್ಗೆ ಪ್ರಥಮ ತನಿಖೆಯನ್ನು ಜರುಗಿಸಿರುವ ಲೋಕಾಯುಕ್ತರು ಸಂಬಂಧಪಟ್ಟ ಆರೋಪಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲೆ ಓದಲಾದ ದಿನಾಂಕ: 16.09.05ರ ಪತ್ರದೊಂದಿಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಅನುಚ್ಛೇದ 12(3) ರ ಅಡಿಯಲ್ಲಿ ವರದಿಯನ್ನು ಕಳುಹಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿ, ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಹಾನಗಲ್ ಮತ್ತು ಶ್ರೀ ಎನ್.ಎಫ್. ಗಟ್ಟಿಮನಿ ಪ್ರಥಮ ದರ್ಜೆ ಸಹಾಯಕರು ಇವರುಗಳು ಈ ಲೋಪಗಳಿಗೆ ಕಾರಣರಾಗಿರುವುದು ಕಂಡುಬಂದಿದೆ.

ಈ ಹಿನ್ನೆಲೆಯಲ್ಲಿ ಈ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ 11 ಮತ್ತು 11-ಎ ನಿಯಮಗಳಡಿಯಲ್ಲಿ ಇಲಾಖಾ ವಿಚಾರಣೆ ಜರುಗಿಸಲು ಈ ಪ್ರಕರಣವನ್ನು ಇದೇ ನಿಯಮಾವಳಿಯ ನಿಯಮ 14(ಎ) ರಡಿಯಲ್ಲಿ ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಲು ಸರ್ಕಾರ ನಿರ್ಧರಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 28 ಎಡಿಇ 2002, ಬೆಂಗಳೂರು, ದಿನಾಂಕ: 19ನೇ ಜನವರಿ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿದ ನಂತರ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 14(ಎ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಹಾನಗಲ್ ಮತ್ತು ಶ್ರೀ ಎನ್.ಎಫ್. ಗಟ್ಟಿಮನಿ, ಪ್ರಥಮ ದರ್ಜೆ ಸಹಾಯಕರು, ಇವರುಗಳ ವಿರುದ್ಧ ಅದೇ ನಿಯಮಗಳ 11 ಮತ್ತು 11 (ಎ) ರನ್ವಯ ಇಲಾಖಾ ವಿಚಾರಣೆ ಜರುಗಿಸಿ ಸರ್ಕಾರಕ್ಕೆ ವರದಿ ನೀಡಲು ಈ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ, ಬೆಂಗಳೂರು ಇವರಿಗೆ ವಹಿಸಿಕೊಟ್ಟು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 155

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಸಹಕಾರ ಸಚಿವಾಲಯ

**ವಿಷಯ:** ಆಳಂದ, ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಗುಲ್ಬರ್ಗಾ ಜಿಲ್ಲೆ, ಇದರ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ರವರ ಪತ್ರ ಸಂಖ್ಯೆ: ಆರ್‌ಸಿಎಸ್ / ಐಎನ್‌ಡಿ 39 / 2003-04, ದಿನಾಂಕ: 30.07.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಪ್ರಸ್ತಾವನೆ ಸಲ್ಲಿಸಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಆಳಂದ, ಗುಲ್ಬರ್ಗಾ ಜಿಲ್ಲೆ ಇದಕ್ಕೆ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಇವರನ್ನು ದಿನಾಂಕ: 22.112003 ರಂದು ವಿಶೇಷ ಅಧಿಕಾರಿಯಾಗಿ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 31(1) ರಡಿಯಲ್ಲಿ ಆರು ತಿಂಗಳ ಅವಧಿಗೆ ನೇಮಿಸಲಾಗಿತ್ತು. ಕಾರ್ಖಾನೆಯು ಆರ್ಥಿಕವಾಗಿ ತುಂಬಾ ನಷ್ಟದಲ್ಲಿದ್ದುದರಿಂದ ಚುನಾವಣೆ ನಡೆಸುವುದು ಕಾರ್ಖಾನೆಯ ಆರ್ಥಿಕ ಹಿತದೃಷ್ಟಿಯಿಂದ ಸಮಂಜಸವಲ್ಲವೆಂದು ಕಾರ್ಖಾನೆಯ ವಿಶೇಷಾಧಿಕಾರಿಗಳ ಕೋರಿಕೆ ಮೇರೆಗೆ 2 ಬಾರಿ ಸಕ್ಕರೆ ನಿರ್ದೇಶಕರು ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸಿರುತ್ತಾರೆ. ಅದರಂತೆ ಒಟ್ಟು ಒಂದೂವರೆ ವರ್ಷಗಳ ಕಾಲ ಅವಧಿಯನ್ನು ವಿಸ್ತರಿಸಲಾಗಿದೆ. ಪ್ರಸ್ತುತ ಸದರಿ ಅವಧಿ ವಿಸ್ತರಣೆಗಾಗಿ ಸಹಕಾರ ಸಂಘಗಳ ಕಾಯ್ದೆ 1959 ಕಲಂ 121 ರ ಅಡಿ ವಿನಾಯಿತಿ ನೀಡಿ ವಿಶೇಷಾಧಿಕಾರಿಗಳ ಅವಧಿಯನ್ನು ದಿ: 28.5.05 ರಿಂದ 6 ತಿಂಗಳ ಅವಧಿಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ.

**ಆದೇಶ ಸಂಖ್ಯೆ: ಸಇ 302 ಸಸಕಾ 2005, ಬೆಂಗಳೂರು, ದಿನಾಂಕ: 13ನೇ ಜನವರಿ 2006**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 121 ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಳಂದ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಗುಲ್ಬರ್ಗಾ ಜಿಲ್ಲೆ, ಇದರ ಆಡಳಿತಾಧಿಕಾರಿಗಳ ಅಧಿಕಾರದ ಅವಧಿಯನ್ನು ದಿ: 28.5.2005 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 156

**ಬಾಣದ ರಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಕ್ರೈಸ್ಟ್ ಎಜುಕೇಷನಲ್ ಸೊಸೈಟಿಯ ಕ್ರೈಸ್ಟ್ ಕಾಲೇಜ್ ಆಫ್ ಎಜುಕೇಷನ್‌ನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1) ದಿನಾಂಕ: 12.03.2004ರ ಸಂ. ಇಡಿ 257 ಯುಆರ್‌ಸಿ 2004ರ ಸರ್ಕಾರಿ ಆದೇಶ.
2) ದಿನಾಂಕ: 21.12.2004 ಸಂ. F.SRO / NCTE / B.Ed / 2005-06 / 4856ರ / NCTE ಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿ: 22.12.2005ರ ಕ್ರೈಸ್ಟ್ ಕಾಲೇಜಿನ ಕಾರ್ಯದರ್ಶಿಯವರ ಪತ್ರ.

**ಪ್ರಸ್ತಾವನೆ:**

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ / ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಕ್ರೈಸ್ಟ್ ಎಜುಕೇಷನಲ್ ಸೊಸೈಟಿ, ಧರ್ಮಾರಾಂ ಕಾಲೇಜ್ ಅಂಡ್ ಪೋಸ್ಟ್, ಬೆಂಗಳೂರು 560029, ಇವರ ಕ್ರೈಸ್ಟ್ ಕಾಲೇಜ್ ಆಫ್ ಎಜುಕೇಷನ್, ಹೊಸೂರು ರಸ್ತೆ, ಬೆಂಗಳೂರು 560029, ಇದರ ಬಿ.ಎಡ್. ಕಾಲೇಜಿಗೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಬೆಂಗಳೂರಿನ ಕ್ರೈಸ್ಟ್ ಎಜುಕೇಷನಲ್ ಸೊಸೈಟಿಯ ಕ್ರೈಸ್ಟ್ ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್. ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ: 22.12.2005 ಪತ್ರದಲ್ಲಿ ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕಾರ್ಯದರ್ಶಿಯವರು ಕ್ರೈಸ್ಟ್ ಕಾಲೇಜ್ ಆಫ್ ಎಜುಕೇಷನ್‌ನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 04 ಯುಬಿವಿ 2006, ಬೆಂಗಳೂರು, ದಿನಾಂಕ: 19ನೇ ಜನವರಿ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಕ್ರೈಸ್ಟ್ ಎಜುಕೇಷನಲ್ ಸೊಸೈಟಿ, ಧರ್ಮಾರಾಂ ಕಾಲೇಜ್ ಅಂಡ್ ಪೋಸ್ಟ್, ಬೆಂಗಳುರು 560029 ಇದರ ಕ್ರೈಸ್ಟ್ ಕಾಲೇಜ್ ಆಫ್ ಎಜುಕೇಷನ್, ಹೊಸೂರು ರಸ್ತೆ, ಬೆಂಗಳೂರು 560029 ನ ಬಿ.ಎಡ್. ಕೋರ್ಸಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 158

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

**ಒಳಾಡಳಿತ ಸಚಿವಾಲಯ**

**ವಿಷಯ:** ಹೆಚ್ಚುವರಿ ಸಿ.ಜೆ. (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಖಾನಾಪುರ ಮತ್ತು ಬೈಲಹೊಂಗಲ ನ್ಯಾಯಾಲಯಗಳಿಗೆ ಹೊಂದಿಕೊಂಡಿರುವಂತೆ ಇರುವ ಸಹಾಯಕ ಸರ್ಕಾರಿ ಅಭಿಯೋಜಕರು ಹಾಗೂ ಪೂರಕ ಸಿಬ್ಬಂದಿಯ ತಾತ್ಕಾಲಿಕ ಹುದ್ದೆಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲಾ 116 ಎಲ್‌ಸಿಇ 96 ದಿನಾಂಕ 31.3.97
2) ಸರ್ಕಾರದ ಆದೇಶ ಸಂಖ್ಯೆ: ಲಾ 90 ಪಿಪಿಇ 99 ದಿನಾಂಕ 24.9.99.
3) ಸರ್ಕಾರದ ಆದೇಶ ಸಂಖ್ಯೆ: ಲಾ 36 ಎಲ್‌ಎಸಿ 03 ದಿನಾಂಕ 7.3.03.
4) ಸರ್ಕಾರದ ಆದೇಶ ಸಂಖ್ಯೆ: ಲಾ 15 ಪಿಪಿಇ 04 ದಿನಾಂಕ 28.4.04.
5) ಸರ್ಕಾರದ ಆದೇಶ ಸಂಖ್ಯೆ: ಲಾ 20 ಪಿಪಿಇ 04 ದಿನಾಮಕ: 6.7.04.
6) ಸರ್ಕಾರದ ಆದೇಶ ಸಂಖ್ಯೆ: ಲಾ 19 ಎಲ್‌ಎಸಿ 05 ದಿನಾಂಕ 29.1.06
7) ಅಭಿಯೋಗ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್ / ಸಿಶಾ-1 / 07 / 05-06 ದಿನಾಂಕ: 25.8.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ 31.03.97ರ ಸರ್ಕಾರಿ ಆದೇಶದಲ್ಲಿ ಅನ್ಯ ನ್ಯಾಯಾಲಯಗಳೊಂದಿಗೆ ಖಾನಾಪುರ ಮತ್ತು ಬೈಲಹೊಂಗಲದ ಹೆಚ್ಚುವರಿ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಗಳನ್ನು ಮತ್ತು ಈ ನ್ಯಾಯಾಯಲಗಳಿಗೆ ಹೊಂದಿಕೊಂಡಂತಿರುವ ಪ್ರತಿ ಅಭಿಯೋಜನಾ ವಿಭಾಗಕ್ಕೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

1. ಸಹಾಯಕ ಸರ್ಕಾರಿ ಅಭಿಯೋಜಕರು - 1 ಹುದ್ದೆ
2. ಬೆರಳಚ್ಚುಗಾರ-ವಾ-ಸಹಾಯಕರು - 1 ಹುದ್ದೆ
3. ದಲಾಯತ್ - 1 ಹುದ್ದೆ

ಮೇಲೆ (2) ರಲ್ಲಿ ಓದಲಾಗಿರುವ ದಿನಾಂಕ 24.09.1999ರ ಸರ್ಕಾರಿ ಆದೇಶದಲ್ಲಿ ಬೈಲಹೊಂಗಲದ ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತಿರುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿನ ಒಂದು ದಲಾಯತ್ ಹುದ್ದೆಯನ್ನು ಮತ್ತು ಖಾನಾಪುರ ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಿರುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿನ ಒಂದು ಬೆರಳಚ್ಚುಗಾರ ಹುದ್ದೆಯನ್ನು ಹಾಗೂ 1 ದಲಾಯತ್ ಹುದ್ದೆಯನ್ನು ರದ್ದುಗೊಳಿಸಲಾಗಿದೆ.

ಮೇಲ್ಕಂಡ ಸದರಿ ಎರಡು ನ್ಯಾಯಾಲಯಗಳ ಕಾರ್ಯಾವಧಿಯನ್ನು ಕಾಲದಿಂದ ಕಾಲಕ್ಕೆ ವಿಸ್ತರಿಸಲಾಗಿದ್ದು, ಅಂತಿಮವಾಗಿ ಮೇಲೆ (5)ರಲ್ಲಿ ಓದಲಾಗಿರುವ ದಿನಾಂಕ 29.1.2005ರ ಸರ್ಕಾರಿ ಆದೇಶದಲ್ಲಿ ದಿನಾಂಕ 01.04.2005 ರಿಂದ ಎರಡು ವರ್ಷ ಅವಧಿಗೆ ಮುಂದುವರೆಸಲಾಗಿದೆ ಮತ್ತು ಸದರಿ ಎರಡು ನ್ಯಾಯಾಲಯಗಳಿಗೆ ಹೊಂದಿಕೊಂಡಂತಿರುವ ಅಭಿಯೋಜನಾ ವಿಭಾಗದ ತಾತ್ಕಾಲಿಕ ಹುದ್ದೆಗಳನ್ನು ಕಾಲದಿಂದ ಕಾಲಕ್ಕೆ ವಿಸ್ತರಿಸಿ ಅಂತಿಮವಾಗಿ ಮೇಲೆ (5) ರಲ್ಲಿ ಓದಲಾಗಿರುವ ದಿನಾಂಕ: 06.07.2004ರ ಸರ್ಕಾರಿ ಆದೇಶದಲ್ಲಿ ದಿನಾಂಕ 01.04.2004 ರಿಂದ ದಿನಾಂಕ 31.03.2005ರ ವರೆಗೆ ಮುಂದುವರೆಸಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ (7) ರಲ್ಲಿ ಓದಲಾಗಿರುವ ದಿನಾಂಕ 25.08.2005ರ ಅಭಿಯೋಗ ನಿರ್ದೇಶಕರು, ಬೆಂಗಳೂರು ಇವರ ಪತ್ರದಲ್ಲಿ ಮೇಲ್ಕಂಡ ಎರಡು ನ್ಯಾಯಾಲಯದಲ್ಲಿನ ಅಭಿಯೋಜನಾ ವಿಭಾಗದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಹುದ್ದೆಗಳನ್ನು ದಿನಾಂಕ: 01.01.2005 ರಿಂದ 11.3.2008 ರ ವರೆಗೆ ಅಥವಾ ಸದರಿ ಹೆಚ್ಚುವರಿ ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಗಳು ಅಸ್ತಿತ್ವದಲ್ಲಿರುವವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸುವ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 690 ಪಿಪಿಇ 2005, ಬೆಂಗಳೂರು, ದಿನಾಂಕ: 20ನೇ ಜನವರಿ 2006**

ಹೆಚ್ಚುವರಿ ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಖಾನಾಪುರ ಇಲ್ಲಿನ ಅಭಿಯೋಜನಾ ವಿಭಾಗದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಮತ್ತು ಹೆಚ್ಚುವರಿ ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೈಲಹೊಂಗಲ ಇಲ್ಲಿನ ಅಭಿಯೋಜನಾ ವಿಭಾಗದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆ ಹಾಗೂ ಒಂದು ಬೆರಳಚ್ಚುಗಾರ-ವಾ-ಸಹಾಯಕ ಹುದ್ದೆಯ ಕಾರ್ಯಾವಧಿಯನ್ನು ದಿನಾಂಕ 01.04.2005 ರಿಂದ 31.3.2007ರ ವರೆಗೆ ಅಥವಾ ಸದರಿ ನ್ಯಾಯಾಲಯಗಳು ಅಸ್ತಿತ್ವದಲ್ಲಿರುವ ವರೆಗೆ ಇವರೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 159

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಕಾ ಮತ್ತು ಸು ಮತ್ತು ಕಾಫಿಪೊಸ ಮತ್ತು ಅಭಿಯೋಗ)

**ಕಂದಾಯ ಸಚಿವಾಲಯ**

**ವಿಷಯ:** ಬಸವಕಲ್ಯಾಣ ಅಭಿವೃದ್ಧಿ ಮಂಡಳಿಗೆ 2005-06 ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಹಾಗೂ ಸಿಬ್ಬಂದಿ ವೇತನ ಪಾವತಿ ವೆಚ್ಚ ಭರಿಸಲು ಅನುದಾನವನ್ನು ಮಂಜೂರು ಮಾಡುವ ಬಗ್ಗೆ.

**ಪ್ರಸ್ತಾವನೆ:**

ಬಸವಕಲ್ಯಾನ ಅಭಿವೃದ್ದಿ ಮಂಡಳಿಗೆ 2005-06 ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಹಾಗೂ ಸಿಬ್ಬಂದಿ ವೇತನ ವೆಚ್ಚ ಭರಿಸಲು ಅನುದಾನ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 71 ಆರ್‌ಇಹೆಚ್ 05, ಬೆಂಗಳೂರು, ದಿನಾಂಕ: 30ನೇ ಜನವರಿ 2006**

ಸರ್ಕಾರವು ಬಸವಕಲ್ಯಾಣ ಅಭಿವೃದ್ದಿ ಮಂಡಳಿಯ ಅಭಿವೃದ್ದಿ ಕಾರ್ಯಕ್ರಮಗಳಿಗೆ ಹಾಗೂ ಸಿಬ್ಬಂದಿ ವೇತನ ಪಾವತಿ ವೆಚ್ಚವನ್ನು ಭರಿಸಲು ಲೆಕ್ಕ ಶೀರ್ಷಿಕೆ 2250-00-103-2-00-101 ಸಹಾಯನುದಾನ (ಯೋಜನೆ) ರಡಿಯಲ್ಲಿ 2005-06ನೇ ಸಾಲಿಗೆ ರೂ. 50.00 ಲಕ್ಷ ರೂಪಾಯಿಗಳು (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

1) ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಬಿಡುಗಡೆ ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತಾ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2) ಅಧೀನ ಕಾರ್ಯದರ್ಶಿ (ಸಮನ್ವಯ ಮತ್ತು ಪತ್ರ ಸ್ವೀಕಾರ) ಕಂದಾಯ ಇಲಾಖೆ ಇವರು ಹಣ ಡ್ರಾ ಮಾಡುವ ಅಧಿಕಾರ ಹೊಂದಿದ್ದು ಪ್ರಸ್ತುತ ಬಿಡುಗಡೆ ಮಾಡಿರುವ ಅನುದಾನವನ್ನು ಪಡೆಯಲು ಬಸವ ಕಲ್ಯಾಣ ಅಭಿವೃದ್ದಿ ಮಂಡಳಿಯ ಆಯುಕ್ತರು ತಯಾರಿಸಿದ ಬಿಲ್ಲುಗಳಿಗೆ ಜಂಟಿ ಕಾರ್ಯದರ್ಶಿ (ಪುನರ್ ವಸತಿ ಮತ್ತು ಭೂ ಸ್ವಾಧೀನ) ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ ಇವರು ಮೇಲೆ ರುಜು ಮಾಡಿ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.

3) ಈ ಅನುದಾನದ ಚೆಕ್ಕನ್ನು ಆಯುಕ್ತರು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬೀದರ್ ಜಿಲ್ಲೆ ಇದರ ಹೆಸರಿನಲ್ಲಿ ನೀಡತಕ್ಕದ್ದು.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1000 ವೆಚ್ಚ 7/05 ದಿನಾಂಕ 24.10.2005 ಅನ್ವಯ ಅನುಮೋದನೆಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 161

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ,

(ಭೂ. ಸ್ವಾ - 2 ಮತ್ತು ಪುನರ್ವಸತಿ)

## ಆರ್ಥಿಕ ಸಚಿವಾಲಯ

**ವಿಷಯ:** ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ವಿತರಿಸಲು ಹೈ ಪವರ್ ಕಮಿಟಿಯನ್ನು ಪುನರ್‌ರಚಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ಎಫ್‌ಡಿ 46 ಇಎಫ್‌ಎಲ್ 2004 ದಿನಾಂಕ: 4.11.2004.

**ಪ್ರಸ್ತಾವನೆ:**

ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ವಿತರಿಸುವ ಸಂಬಂಧ ಸಂಸ್ಥೆಗಳಿಂದ ಸ್ವೀಕರಿಸುವ ಪ್ರಸ್ತಾವನೆಗಳನ್ನು ಪರಿಶೀಲಿಸುವ ದೃಷ್ಟಿಯಿಂದ ಮೇಲೆ ಓದಲಾದ ದಿನಾಂಕ: 4.11.2004 ರ ಸರ್ಕಾರಿ ಆದೇಶದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಹೈ ಪವರ್ ಕಮಿಟಿಯನ್ನು ರಚಿಸಲಾಗಿತ್ತು. ಆದರೆ ಅಬಕಾರಿ ಖಾತೆಯನ್ನು ಮರು ಹಂಚಿಕೆ ಮಾಡಿರುವುದರಿಂದ ಮಾನ್ಯ ರೇಷ್ಮೆ ಮತ್ತು ಅಬಕಾರಿ ಸಚಿವರ ನೇತೃತ್ವದ ಅಧ್ಯಕ್ಷತೆಯಲ್ಲಿ ಹೈ ಪವರ್ ಕಮಿಟಿ ರಚಿಸುವ ಬಗ್ಗೆ ದಿ: 21.9.2005 ರಂದು ಮಾನ್ಯ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಚರ್ಚಿಸಲಾಯಿತು. ಅಬಕಾರಿ ಆಯುಕ್ತರ ಕಛೇರಿಯ ಹಂತದಲ್ಲಿ ತಾಂತ್ರಿಕ ಉಪ ಸಮಿತಿಯಲ್ಲಿ ಆರ್‌ಎಸ್-2 ಮತ್ತು ಡಿಎಲ್-3 ಸನ್ನದು ಅರ್ಜಿಗಳನ್ನು ಪರಿಶೀಲಿಸಿ ಸಲ್ಲಿಸುವ ಶಿಫಾರಸ್ಸುಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯು ಪರಿಶೀಲಿಸಿ, ಪ್ರತಿ ಅರ್ಜಿಯನ್ನು ಅರ್ಹತೆಗೆ ಅನುಸಾರವಾಗಿ ಮಾನ್ಯ ಅಬಕಾರಿ ಸಚಿವರಿಗೆ ಅಂತಿಮ ನಿರ್ಧಾರ ಕೈಗೊಳ್ಳಲು ಸಲ್ಲಿಸಬೇಕೆಂದು ನಿರ್ಣಯ ಕೈಗೊಳ್ಳಲಾಯಿತು. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 43 ಇಎಫ್‌ಎಲ್ 2005, ಬೆಂಗಳೂರು, ದಿನಾಂಕ: 18ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ಹಂಚಿಕೆ ಮಾಡಲು ಈ ಕೆಳಕಂಡಂತೆ ಹೈ ಪವರ್ ಕಮಿಟಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 1 (ಒಂದು) ವರ್ಷದ ಅವಧಿಗೆ ಪುನರ್ ರಚಿಸಲಾಗಿದೆ.

| | | | |
|---|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಆರ್ಥಿಕ ಇಲಾಖೆ, | - | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. | - | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿಗಳು<br>(ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ. | - | ಸದಸ್ಯರು |
| 4. | ಪ್ರಾಧ್ಯಾಪಕರು,<br>ರಾಸಾಯನಿಕ ಇಂಜಿನಿಯರಿಂಗ್ ವಿಭಾಗ,<br>ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು. | - | ಸದಸ್ಯರು |
| 5. | ಪ್ರೊ: ಎಂ.ಎಸ್. ಕಾಮತ್<br>ಪ್ರಾಂಶುಪಾಲರು, ಪಿ.ಇ.ಕಾಲೇಜು ಆಫ್ ಇಂಜಿನಿಯರಿಂಗ್, ಮಂಗಳೂರು. | - | ಸದಸ್ಯರು |
| 6. | ಅಬಕಾರಿ ಆಯುಕ್ತರು,<br>ಬೆಂಗಳೂರು. | - | ಸದಸ್ಯರು |
| 7. | ಸರ್ಕಾರದ ಜಂಟಿ ಕಾರ್ಯದರ್ಶಿ,<br>(ಆಡಳಿತ) ಆರ್ಥಿಕ ಇಲಾಖೆ. | - | ಸದಸ್ಯರು |
| 8. | ಅಬಕಾರಿ ಜಂಟಿ ಆಯುಕ್ತರು<br>(ಡಿ ಮತ್ತು ಬಿ) ಬೆಂಗಳೂರು. | - | ಸದಸ್ಯ ಕಾರ್ಯದರ್ಶಿ |

ರಾಸಾಯನಿಕ ಘಟಕಗಳಿಂದ ರೆಕ್ಟಿಫೈಡ್ ಸ್ಪಿರಿಟ್ / ಡಿನೇಚರ್ಡ್ ಸ್ಪಿರಿಟ್ ಹಂಚಿಕೆಗೆ ಕೋರಿ ಬರುವ ಪ್ರಸ್ತಾವನೆಗಳನ್ನು ಸದರಿ ಸಮಿತಿ ಈ ರಾಸಾಯನಿಕ ಘಟಕಗಳಲ್ಲಿನ ಮೂಲಭೂತ ಸೌಕರ್ಯ, ಆರ್‌ಎಸ್ / ಡಿಎಸ್ ಅವಶ್ಯಕತೆ, ಇತ್ಯಾದಿಗಳನ್ನು ಸಮಿತಿಯು ಸಮಯಾನುಸಾರ ಪರಿಶೀಲಿಸಿ ಶಿಫಾರಸ್ಸು ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 166

**ಬಿ. ಕೋದಂಡರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ ಆರ್ಥಿಕ ಇಲಾಖೆ (ಅಬಕಾರಿ).

## AGRICULTURE AND HORTICULTURE SECRETARIAT

**Subject:** Extension of NOVOD Board Sponsored Programme "Elite Nursery & Plantation and TBOs garden" sanctioned during 2004-05 for the year 2005-06 regarding.

**Read:** 1) G.O. No. AHD 297 HPP 2004 dated 19.01.2005.

2) NOVOD letter No. 30-100 / NOVOD / 2005 / 2775-91 dated 19.7.2005.

3) Letter of the Director of Horticulture No. ತೋನಿ / ತೋಅನಿ / ತಾಬೆಯೋ / ಸತೋಅ-1 / 3 / 04-05, dated: 11.8.2005

**PREAMBLE:**

The Director of Horticulture had been given approval for implementation of National Oil Seeds and Vegetable Oils Development Board (NOVOD), Ministry of Agriculture, Government of India sponsored project on "Tree Borne Oil Seeds" during 2004-05 vide Government Order read at (1) above, NOVOD had released an amount Rs. 19.00 lakh during the year 2005-06 and the Director of Horticulture has informed vide his letter read at (3) above that this could not be utilized during 2005-06 and hence NOVOD Board has agreed to continue the programme during 2005-06 for the completion of the targets as per letter read at (2) above. The Director of Horitculture has requested the Government to release the said amount during 2005-06.

Finance Department has agreed to release the funds during the year 2005-06 and has suggested to issue an Administrative Order first. Hence this order.

**GOVERNMENT ORDER No. AHD 125 HPP 2005, BANGALORE, DATED: 17th JANUARY 2006**

Government is pleased to accord the administrative approval for implementation of NOVOD Board Sponsored Programme "Elite Nursery & Plantation and TBOs garden" sanctioned during 2004-05 for the year 2005-06 at a total cost of Rs. 19.00 lakh (Rupees Nineteen Lakh Only).

The Project will be implemented strictly in accordance with the terms and conditions stipulated by NOVOD and purchases if any will be made strictly in accordance with Karnataka Transparency in Public Procurement Act 1999. The Director of Horticulture shall submit monthly progress report of the said programme to the NOVOD every month in the prescribed format and the utilization certificate immediately after the completion of the programme as prescribed by NOVOD under intimation to the Government.

The amount so sanctioned will first be released from out of Contingent Fund, Head of Account 8000-00-251-0-00, Crop Husbandry and later on it will be recouped to the Fund by Supplementary Estimates from Head of Account 2401-00-114-0-02-059 (Plan). This is only an Administrative Order and funds shall not be drawn unless a separate order is issued by the Finance Department releasing the budget from out of Contingent Fund. The Drawing Officer shall present the bill to the Tresury for drawl of funds from Contingent Fund along with a separate Order to be issued by the Finance Department only then the Treasury shall take action to release the funds.

This order issues with the concurrence of the Finance Department as per its Note No. ಆಇ 15 ವೆಚ್ಚ-4 / 05 dated 6.1.2006.

By Order and in the name of the Governor of Karnataka,

**VIJAYALAKSHMI**

Desk Officer, (Horticulture),

Agriculture & Horticulture Department.

P.R. 167

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಮಡಿಕೇರಿ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ನೇಮಿಸಿರುವ ಮಂಡನಾಧಿಕಾರಿಯನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂ: ಒಇ 69 ಪಿಪಿಇ 2005, ಬೆಂಗಳೂರು, ದಿನಾಂಕ 17.11.2005.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ ಡಿಪಿಎನ್ : ಕೇಂಸ : ಜಿ-63 / 2000-01 ದಿ: 21.12.05.

**ಪ್ರಸ್ತಾವನೆ:**

ಶ್ರೀ ಎಂ. ನರಸಪ್ಪ ಅಧಿಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ಇವರು ಚಿಕ್ಕಮಗಳೂರಿನ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಅಧಿಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚಿಕ್ಕಮಗಳೂರು ಅರಕ್ಷಕ ಠಾಣೆ ಗುನ್ನೆ ಸಂ: 188/2000ರಲ್ಲಿ ಆರೋಪಿಯಾದ ಜಿ. ಸುರೇಶ್ ಇವರಿಂದ ನಿರೀಕ್ಷಣಾ ಜಾಮೀನು ದೊರಕಿಸಿಕೊಡಲು ಮತ್ತು ದೋಷಾರೋಪಣ ಪಟ್ಟಿ ಯಥಾಸ್ಥಿತಿ ಸಲ್ಲಿಸಲು ಲಂಚಕ್ಕಾಗಿ ಒತ್ತಾಯಪಡಿಸಿರುವ ಸಂಬಂಧವಾಗಿ ಮಾಡಲಾಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಮೇಲೆ ಕ್ರಮಾಂಕ 1ರಲ್ಲಿ ಓದಲಾಗಿರುವ ದಿನಾಂಕ 17.11.2005ರ ಸಮಸಂಖ್ಯೆಯ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ನೇಮಿಸಲಾಗಿದ್ದು ವಿಚಾರಣಾ ಪ್ರಾಧಿಕಾರಿಯ ಮುಂದೆ ಸರ್ಕಾರದ

ಪರವಾಗಿ ದಾಖಲೆಗಳನ್ನು ಮಂಡಿಸಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)(ಸಿ) ರನ್ವಯ ಶ್ರೀಯುತ ಟಿ. ನಾಗರಾಜರೆಡ್ಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ ಕ್ರಮಾಂಕ 2ರಲ್ಲಿ ಓದಲಾಗಿರುವ ದಿನಾಂಕ 21.12.2005ರ ಮತ್ತು ನಿರ್ದೇಶಕರು, ಅಭಿಯೋಗ ಮತ್ತು ವ್ಯಾಜ್ಯಗಳ ಇಲಾಖೆ ಇವರ ಪತ್ರದಲ್ಲಿ ಶ್ರೀ ಎಂ. ನರಸಪ್ಪ ಇವರು ಶ್ರೀಯುತ ಟಿ. ನಾಗರಾಜರೆಡ್ಡಿ ಇವರಿಗಿಂತ ಹಿರಿಯ ಅಧಿಕಾರಿಗಳಾಗಿರುವುದರಿಂದ ಮಂಡನಾಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು ಸೂಕ್ತವಾಗಲಾರದು, ಆದ ಕಾರಣ ಶ್ರೀ ಟಿ. ನಾಗರಾಜರೆಡ್ಡಿ ಇವರ ಬದಲಿಗೆ ಶ್ರೀ ಕೆ.ಬಿ. ಕುಲಕರ್ಣಿ, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸುವಂತೆ ಕೋರಿರುತ್ತಾರೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ: ಒಇ 69 ಪಿಪಿಇ 2005, ಬೆಂಗಳೂರು, ದಿನಾಂಕ: 27ನೇ ಜನವರಿ 2006**

ಪ್ರಸ್ತಾವನೆಯಲ್ಲಿ ಸೂಚಿಸಿರುವ ಕಾರಣಕ್ಕಾಗಿ ದಿನಾಂಕ 17.11.2005ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ ಸದರಿ ಪ್ರಕರಣದಲ್ಲಿ ಶ್ರೀ ಟಿ. ನಾಗರಾಜರೆಡ್ಡಿ, ಮಂಡನಾಧಿಕಾರಿ ಇವರ ಬದಲಿಗೆ ವಿಚಾರಣಾ ಅಧಿಕಾರಿಯವರ ಮುಂದೆ ಸರ್ಕಾರದ ಪರವಾಗಿ ದಾಖಲೆಗಳನ್ನು ಮಂಡಿಸಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)(ಸಿ) ರನ್ವಯ ಶ್ರೀ ಕೆ.ಬಿ. ಕುಲಕರ್ಣಿ, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಕಾ. ಮತ್ತು ಸು. ಮತ್ತು ಅಭಿಯೋಗಗಳು).

ಪಿ.ಆರ್. 168

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು ಮತ್ತು ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ, ಇವರುಗಳ ವಿರುದ್ಧ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ:**
1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ ಡಿಪಿಎನ್: ಬಿಸಿ / ಸಿಆರ್-02/ 2002 ದಿ: 29.10.2002 ಮತ್ತು ದಿ: 15.9.2003.
2) ಕಾರಣ ಕೇಳುವ ತಿಳುವಳಿಕೆ ಪತ್ರ ಸಂ: ಲಾ 222 ಪಿಪಿಇ 2002 ದಿನಾಂಕ 16.12.2003.
3) ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ 12.1.2004.

**ಪ್ರಸ್ತಾವನೆ:**

ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು, ಮಡಿಕೇರಿ ಇವರು ಬೆಂಗಳೂರಿನ ಸಿಎಂಎಂ ನ್ಯಾಯಾಲಯದಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ (i) ಸದರಿ ನ್ಯಾಯಾಲಯದ 8 ಪ್ರಕರಣಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದಿಂದ ತೀರ್ಪಿನ ಪ್ರತಿಗಳನ್ನು ಪಡೆಯಲು ಅರ್ಜಿ ಸಲ್ಲಿಸಿ ಅವುಗಳನ್ನು ನ್ಯಾಯಾಲಯದಿಂದ ಪಡೆಯದಿರುವ ಬಗ್ಗೆ ಬಿಡುಗಡೆಯಾದ, (ii) ದೋಷಮುಕ್ತವಾದ 17 ಮೊಕದ್ದಮೆಗಳ ತೀರ್ಪಿನ ಪ್ರತಿಗಳಿಗೆ ಅರ್ಜಿ ಸಲ್ಲಿಸಲು ಯಾವುದೇ ಕ್ರಮ ಕೈಗೊಳ್ಳದೆ, ಇರುವ ಬಗ್ಗೆ (iii) ನ್ಯಾಯಾಲಯದಲ್ಲಿ ವಿಲೇವಾರಿ ಆದ ಪ್ರಕರಣಗಳ ತೀರ್ಪು ಮತ್ತು ಆದೇಶಗಳಿಗೆ ಅರ್ಜಿ ಸಲ್ಲಿಸಿ ಅವುಗಳ ದೃಢೀಕೃತ ಕರಡು ಅಭಿಪ್ರಾಯದೊಂದಿಗೆ ಸಲ್ಲಿಸದೇ ಮತ್ತು ಸದರಿ ಕಛೇರಿ ಸಿಬ್ಬಂದಿ ವರ್ಗದವರಿಗೆ ವಹಿಸಿದ ಕೆಲಸ ಕಾರ್ಯಗಳನ್ನು ಸರಿಯಾಗಿ ನಿರ್ವಹಿಸುತ್ತಿರುವ ಬಗ್ಗೆ ಪರಿಶೀಲನೆ ಮಾಡದೆ ಕರ್ತವ್ಯಲೋಪ ಎಸಗಿರುವ ಬಗ್ಗೆ ಮತ್ತು

ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ-ವ-ಸಹಾಯಕರಾಗಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿಎಂಎಂ ನ್ಯಾಯಾಲಯ, ಬೆಂಗಳೂರು ಇಲ್ಲಿ ಬೆರಳಚ್ಚುಗಾರ್ತಿ-ವ-ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಬೆಂಗಳೂರಿನ ಮಹಿಳಾ ಸಮಾಜಕ್ಕೆ ಸಂಬಂಧಿಸಿದ (ಸಿ.ಸಿ.ನಂ. 787/92 ಮತ್ತು ಇತರೆ 7) ಪ್ರಕರಣಗಳ ಬಗ್ಗೆ ಮಾಹಿತಿ ಕೋರಿ ಸದರಿ ಸಮಾಜದ ಶ್ರೀಮತಿ ಸುಬ್ಬಲಕ್ಷ್ಮಿ ಎಂಬುವರಿಗೆ ಸರಿಯಾಗಿ ಮಾಹಿತಿ ನೀಡದೆ ಬೇಜವಾಬ್ದಾರಿಯಿಂದ ವರ್ತಿಸಿರುವ ಬಗ್ಗೆ ಮತ್ತು ಸದರಿ ನ್ಯಾಯಾಲಯದ 17 ಬಿಡುಗಡೆಯಾದ, ದೋಷಮುಕ್ತವಾದ ಮೊಕದ್ದಮೆಗಳ ತೀರ್ಪಿನ ಪ್ರತಿಗಳಿಗೆ ಅರ್ಜಿ ಸಲ್ಲಿಸಲು ಯಾವುದೇ ಕ್ರಮ ಕೈಗೊಳ್ಳದೆ ತಮಗೆ ವಹಿಸಿದ ಕಛೇರಿಯ ಕೆಲಸಗಳನ್ನು ಸರಿಯಾಗಿ ನಿರ್ವಹಿಸದೆ ಇರುವ ಬಗ್ಗೆ ಸದರಿ ಅಧಿಕಾರಿ ಮತ್ತು ನೌಕರರ ವಿರುದ್ಧ ಕ್ರಮ ಜರುಗಿಸುವಂತೆ ಮೇಲೆ (1) ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಕೋರಿರುತ್ತಾರೆ. ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು ಬೆಂಗಳೂರು ಸಿಎಂಎಂ ನ್ಯಾಯಾಲಯದಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಮತ್ತು ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚು ಗಾರ್ತಿ-ವ-ಸಹಾಯಕರು ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋ. ಪಟ್ಟಿ ಅನುಬಂಧ-1 ರಿಂದ 4ರ ವರೆಗೆ ಜಾರಿಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಮೇಲೆ (2) ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ತಿಳಿಸಲಾಗಿದ್ದಿತು.

ಮೇಲೆ (3)ರಲ್ಲಿ ಓದಲಾಗಿರುವ ಪತ್ರದಲ್ಲಿ ಆರೋಪಿತ ಅಧಿಕಾರಿಯು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಆದರೆ ಆರೋಪಿತ ನೌಕರಳು ಶ್ರೀಮತಿ ಎಂ. ಶಶಿರೇಖಾ ಯಾವುದೇ ಲಿಖಿತ ಹೇಳಿಕೆಯನ್ನು ನೀಡಿರುವುದಿಲ್ಲ. ಈ ಬಗ್ಗೆ ಆರೋಪಿತ ಅಧಿಕಾರಿ, ಶ್ರೀ ಸುಧೀಪ್ ಬಂಗೇರ ಇವರು ಸಲ್ಲಿಸಿರುವ ವಿವರಣೆಯು ಸಮಂಜಸವಾಗಿಲ್ಲದಿರುವುದರಿಂದ ಮತ್ತು ಆರೋಪಿತ ನೌಕರಳಾಯ ಶ್ರೀಮತಿ ಎಂ. ಶಶಿರೇಖಾ ಇವರು ಯಾವುದೇ

ಸಮಜಾಯಿಷಿ ಸಲ್ಲಿಸದೆ ಇರುವುದರಿಂದ ಆರೋಪಗಳ ಆರೋಪಗಳ ಸತ್ಯಾ ಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 275 ಪಿಪಿಇ 2005, ಬೆಂಗಳೂರು, ದಿನಾಂಕ: 28ನೇ ಜನವರಿ 2006**

ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು ಬೆಂಗಳೂರು ಸಿಎಂಎಂ ನ್ಯಾಯಾಲಯದಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ-ವ-ಸಹಾಯಕಿ ಇವರ ವಿರುದ್ಧದ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು ಉಪಬಂಧಗಳಿಗನುಸಾರವಾಗಿ ನಿಯಮ 13ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ನಿಯಮ (2)ರಡಿಯಲ್ಲಿ ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾ ಪ್ರಾಧಿಕಾರಿಯಾಗಿ ಮತ್ತು ಪ್ರಕರಣದ ದಾಖಲೆಗಳನ್ನು ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರಿಯವರ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ 11(5)(ಸಿ)ರನ್ವಯ ಶ್ರೀ ಎಲ್.ಎ. ಜವಳಿ, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಿಭಾಗ ಇವರನ್ನು ಮಂಡನಾಧಿಕಾರಿಯಾಗಿ ಕೆಳಕಂಡ ಷರತ್ತುಗಳೊಂದಿಗೆ ಸರ್ಕಾರವು ನೇಮಿಸಿದೆ.

1. ಇಲಾಖಾ ವಿಚಾರಣೆಯನ್ನು ಕೂಡಲೇ ಪ್ರಾರಂಭಿಸಿ ಎರಡು ತಿಂಗಳೊಳಗೆ ವಿಚಾರಣೆಯನ್ನು ಮುಕ್ತಯಗೊಳಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಕಾ. ಮತ್ತು ಸು. ಮತ್ತು ಅಭಿಯೋಗಗಳು).

ಪಿ.ಆರ್. 169

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಎಂ.ಪಿ. ಅಣ್ಣಿಗೇರಿ, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ ಇವರ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:**
1) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಸಿ3 : ಶಿಸ್ತು : ರೇವಿಅ : 21 : 2000-01 ದಿನಾಂಕ: 2.6.2004
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಆದೇಶ ಸಂಖ್ಯೆ: ಸಿಬ್ಬಂದಿ : 3 : ಶಿಸ್ತು : ರೇವಿಅ : 01 : 2001-02 ದಿನಾಂಕ: 28.6.2004
3) ಕಾರ್ಯದರ್ಶಿ ಲೋಕಸೇವಾ ಆಯೋಗ, ಇವರ ಪತ್ರ ಸಂಖ್ಯೆ: ಪಿಎಸ್‌ಸಿ : 60 : ಸಿಎನ್‌ಎಸ್ : 05, ದಿನಾಂಕ: 27.7.2005.

**ಪ್ರಸ್ತಾವನೆ:**

ಶ್ರೀ ಎಂ.ಪಿ. ಅಣ್ಣಿಗೇರಿ, ರೇಷ್ಮೆ ವಿಸ್ತಣಾಧಿಕಾರಿ, ತಾಂತ್ರಿಕ ಸೇವಾ ಕೇಂದ್ರ ಶಿಕಾರಿಪುರ, ಇವರು 1990-91 ಮತ್ತು 1991-92ನೇ ಸಾಲಿನಲ್ಲಿ ತಾಂತ್ರಿಕ ಸೇವಾ ಕೇಂದ್ರ, ಇಂಡಿಯಲ್ಲಿ ಪ್ರಭಾರಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಹಣ ತೆಗೆಯುವ ಅಧಿಕಾರಿಯಾಗಿ ಸಂಕ್ಷಿಪ್ತ ಸಾದಿಲ್ವಾರು ಬಿಲ್ಲುಗಳ ಮೇಲೆ ರೂ. 79,875-00 ಗಳನ್ನು ನಗಧೀಕರಿಸಿದ್ದು, ಈ ಬಿಲ್ಲುಗಳ ಮೇಲೆ ವೋಚರುಗಳನ್ನು ತಯಾರಿಸಿ ಎನ್‌ಡಿಸಿ ಬಿಲ್ಲುಗಳನ್ನು ಪ್ರಭಾರವಹಿಸದೆ ಹಾಗೂ ಹಣಕ್ಕೆ ಸಂಬಂಧಪಟ್ಟ ಕರಾರುವಕ್ಕಾದ ಲೆಕ್ಕಪತ್ರಗಳನ್ನು ನಿರ್ವಹಿಸದೆ ಹಣವನ್ನು ದುರುಪಯೋಗ ಪಡಿಸಿಕೊಂಡಿದ್ದಾರೆಂದು ಆಪಾದಿಸಿ ಇಲಾಖಾ ವಿಚಾರಣೆಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಆದೇಶಿಸಿದ್ದು, ಇಲಾಖಾ ವಿಚಾರಣೆ ನಡೆಸಿದ ರೇಷ್ಮೆ ಜಂಟಿ ನಿರ್ದೇಶಕರು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ, ಇವರು ತಮ್ಮ ವರದಿಯಲ್ಲಿ ಶ್ರೀ ಅಣ್ಣಿಗೇರಿಯವರು ಇಲಾಖಾ ವಿಚಾರಣೆಗೆ ಒಂದು ಬಾರಿಯೂ ಹಾಜರಾಗದೆ ನಿರ್ಲಕ್ಷ್ಯವನ್ನು ತೋರಿದ್ದು ಇವರು ಗೈರು ಹಾಜರಿಯಲ್ಲಿ ದಾಖಲೆ ಮತ್ತು ಸಾಕ್ಷಿಗಳ ಆಧಾರದ ಮೇಲೆ ವಿಚಾರಣೆ ನಡೆಸಿರುತ್ತಾರೆ. ವಿಚಾರಣೆ ನಂತರ ಶ್ರೀ ಎಂ.ಪಿ. ಅಣ್ಣಿಗೇರಿ, ರೇಷ್ಮೆ ವಿಸ್ತರಣಾಧಿಕಾರಿ, ಇವರ ಮೇಲಿನ ಆರೋಪಗಳು ಸಾಬೀತಾಗಿರುತ್ತದೆಂದು ವಿಚಾರಣಾಧಿಕಾರಿಯಾದ ರೇಷ್ಮೆ ಜಂಟಿ ನಿರ್ದೇಶಕರು, ಚಿತ್ರದುರ್ಗ, ಇವರು ನಿರ್ಣಯಕ್ಕೆ ಬಂದಿರುತ್ತಾರೆ. ಹಣ ದುರುಪಯೋಗದ ಆಪಾದನೆಯು ಸಾಬೀತಾಗಿರುವುದರಿಂದ ಶ್ರೀ ಎಂ.ಪಿ. ಅಣ್ಣಿಗೇರಿ, ರೇಷ್ಮೆ ವಿಸ್ತರಣಾಧಿಕಾರಿ, ಇವರಿಗೆ ಕಠಿಣ ದಂಡನೆ ವಿದಿಸುವುದು ಸೂಕ್ತವೆಂದು ಶಿಸ್ತು ಪ್ರಾಧಿಕಾರಿಯಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲೆ ಓದಲಾದ (1)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2) ಶ್ರೀ ಎಂ.ಪಿ. ಅಣ್ಣಿಗೇರಿಯವರ ವಿರುದ್ಧದ ಇನ್ನೊಂದು ಶಿಸ್ತು ಪ್ರಕರಣದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 8(iv)(ಎ) ರನ್ವಯ ಕಾಲಿಕ ವೇತನ ಶ್ರೇಣಿಯಲ್ಲಿ ಕೆಳಹಂತಕ್ಕೆ ಇಳಿಸುವ ದಂಡನೆಯನ್ನು ಮೇಲೆ ಓದಲಾದ (2)ರ ಆದೇಶದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ವಿಧಿಸಿರುತ್ತಾರೆ. ಈ ಅಂಶಗಳನ್ನು ಗಮನಿಸಿದಾಗ ಶ್ರೀ ಅಣ್ಣಿಗೇರಿಯವರು ಸರ್ಕಾರದ ಕರ್ತವ್ಯವನ್ನು ನಿರ್ವಹಿಸುವಲ್ಲಿ ಕಾಳಜಿ ತೋರುತ್ತಿರುವಂತೆ ಕಂಡುಬರುವುದಿಲ್ಲ. ಆದುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮದಡಿ ಪ್ರದತ್ತವಾದ ಅಧಿಕಾರದನ್ವಯ ಕಠಿಣ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಲಾಗಿದೆ.

3) ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ರೆಗ್ಯುಲೇಷನ್ 2000 ದ ಐಟಂ 5 ರನ್ವಯ ಪ್ರಸ್ತಾವನೆಗೆ ಸಹಮತಿಯನ್ನು ಮೇಲೆ ಓದಲಾದ (3) ರ ಪತ್ರದನ್ವಯ ಪಡಯಲಾಗಿದೆ.

4) ಈ ಕಾರಣಗಳಿಂದಾಗಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಶಿಫಾರಸ್ಸಿನನ್ವಯ ಹಾಗೂ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ವಯ ಶ್ರೀ ಎಂ.ಪಿ. ಅಣ್ಣಿಗೇರಿ, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(iv) ರನ್ವಯ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ : 191 : ರೇಸೇವಿ : 2004, ಬೆಂಗಳೂರು, ದಿನಾಂಕ: 28ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಪಿ. ಅಣ್ಣಿಗೇರಿ, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 8(iv) ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ಸರ್ಕಾರವು ವಿಧಿಸಿದೆ.

ಶ್ರೀ ಎಂ.ಪಿ. ಅಣ್ಣಿಗೇರಿ, ರೇಷ್ಮೆ ವಿಸ್ತರಣಾಧಿಕಾರಿ, ಇವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ. 79,000-00 ಗಳನ್ನು ಅವರ ನಿವೃತ್ತ ಸೌಲಭ್ಯಗಳಿಂದ ವಸೂಲಿ ಮಾಡಲು ಸಹ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ದೇವಿಕ**

ಪಿ.ಆರ್. 173

ಸರ್ಕಾರದ ಅಧೀನ ಕಾರ್ಯದರ್ಶಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಜಿ. ದಕ್ಷಿಣಮೂರ್ತಿ, ನಿವೃತ್ತ ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನಕ್ಕೆ ಪರಿಗಣಿಸುವ ಕುರಿತು.

**ಓದಲಾಗಿದೆ:** ಅಧಿಕಾರಿಯವರ ಮನವಿ ದಿನಾಂಕ: 19.10.2005.

**ಪ್ರಸ್ತಾವನೆ:**

ಶ್ರೀ ಜಿ. ದಕ್ಷಿಣಮೂರ್ತಿ, ನಿವೃತ್ತ ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಅವರ ಮೇಲೆ ಓದಲಾದ ಮನವಿಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಯಲ್ಲಿ ತಮ್ಮ ಸೇವೆಯನ್ನು ವಿಲೀನಗೊಳಿಸುವ ಮೊದಲು ತಾವು ಮುನ್ಸಿಫ್ ಆಗಿ ನ್ಯಾಯಾಂಗ ಇಲಾಖೆಯಲ್ಲಿ ಸಲ್ಲಿಸಿದ ಸೇವೆಯನ್ನು ಕೆ.ಸಿ.ಎಸ್.ಆರ್. ನಿಯಮ 247 (1) ಮತ್ತು (2) ರನ್ವಯ ನಿವೃತ್ತಿ ವೇತನಕ್ಕೆ ಪರಿಗಣಿಸಿ ಸೂಕ್ತ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 372 ಸಆಸೇ 2005, ಬೆಂಗಳೂರು, ದಿನಾಂಕ: 23ನೇ ಜನವರಿ 2006**

ಶ್ರೀ ಜಿ. ದಕ್ಷಿಣಮೂರ್ತಿ, ನಿವೃತ್ತ ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಅವರು ನ್ಯಾಯಾಂಗ ಇಲಾಖೆಯಲ್ಲಿ ಮುನ್ಸಿಫ್ ಆಗಿ ನೇರ ನೇಮಕಾತಿ ಹೊಂದಿದ್ದ ದಿನಾಂಕದಂದು 31 ವರ್ಷ 20 ದಿನಗಳ ವಯಸ್ಸುಳ್ಳವರಾಗಿದ್ದು, 1996ರ ಇಸವಿಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ನಾಗರೀಕ ಸೇವೆಯಲ್ಲಿ (ಸಿವಿಲ್ ಸರ್ವಿಸಸ್) ವಿಲೀನಗೊಂಡು ತದನಂತರ ದಿನಾಂಕ: 30.9.2005 ರಂದು ನಿವೃತ್ತಿ ಹೊಂದಿರುವ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 247 (1) ಮತ್ತು (2) ರಲ್ಲಿರುವ ಅವಕಾಶದಂತೆ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಟ 5 ವರ್ಷಗಳ ಸೇವಾ ಹೆಚ್ಚಳವನ್ನು ಪರಿಗಣಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 2173 ವೆಚ್ಚ-5/2005, ದಿನಾಂಕ: 15.12.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 174

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಸಹಕಾರ ಸಚಿವಾಲಯ**

**ವಿಷಯ:** ಜಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಹುದ್ದೆಗಳನ್ನು ಸ್ಥಳಾಂತರಿಸಿ, ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಜಗಳೂರು ಇವರನ್ನು ವೇತನ ಬಟವಾಡೆ ಅಧಿಕಾರಿ ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 129 ಎಂಆರ್ಇ 99(1) ದಿನಾಂಕ: 19.12.2000.
2) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ / 266 / ಸಿಬ್ಬಂದಿ-1(ಸಿ) 02/99 ದಿನಾಂಕ: 25.07.2003.
3) ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ / 49 / ನಿಯವಿ / 99 ದಿನಾಂಕ: 18.06.2004.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 19.12.2000 ರನ್ವಯ ದಾವಣಗೆರೆ ಸಮಿತಿಯನ್ನು ವಿಭಜಿಸಿ ಜಗಳೂರು ತಾಲ್ಲೂಕಿಗೆ ಪ್ರತ್ಯೇಕವಾದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಸ್ಥಾಪಿಸಲಾಗಿದೆ. ಸದರಿ ಸಮಿತಿಯ ಕಾರ್ಯಚಟುವಟಿಕೆಯು ಜಗಳೂರು ತಾಲ್ಲೂಕಿನ ವ್ಯಾಪ್ತಿಯನ್ನು ಹೊಂದಿದ್ದು ಮತ್ತು ಸಮಿತಿಯಲ್ಲಿನ ಕೆಲವು ಹುದ್ದೆಗಳು ಕಾರ್ಯಕಾರಿ ಹುದ್ದೆಗಳಾಗಿರುವುದರಿಂದ ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಹೊಸದಾಗಿ ಸ್ಥಾಪಿಸಲಾಗಿರುವ ಜಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ವಿವಿಧ ಪದವೃಂದಗಳ 6 ಹುದ್ದೆಗಳನ್ನು ಈ ಕೆಳಕಂಡ ಸಮಿತಿಗಳಿಂದ ಸ್ಥಳಾಂತರಿಸಲು ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ: 18.06.2004 ರ ಪತ್ರದಲ್ಲಿ ಕೃಷಿ ಮಾರಾಟ ಇಲಾಖೆಯ ಆಯುಕ್ತರು ಪ್ರಸ್ತಾಪಿಸಿರುತ್ತಾರೆ :-

| ಕ್ರ ಸಂ. | ಹುದ್ದೆಯ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಸ್ಥಳಾಂತರಿಸಬಹುದಾದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಹಾಗೂ ಹುದ್ದೆ ವಿವರ | ಷರಾ |
|---|---|---|---|---|---|
| 1 | ಕಾರ್ಯದರ್ಶಿ | 5575-10620 | 01 | ಸಹಾಯಕ ಕಾರ್ಯದರ್ಶಿ ಕೃಉಮಾಸ, ದಾವಣಗೆರೆ | ಸಹಾಯಕ ಕಾರ್ಯದರ್ಶಿ ಎಂಬ ಪದನಾಮವನ್ನು ಕಾರ್ಯದರ್ಶಿ ಎಂದು ಪದನಾಮೀಕರಿಸುವುದು |
| 2 | ಲೆಕ್ಕಿಗರು ದರ್ಜೆ - 2 | 3850-7050 | 01 | ಪ್ರಥಮ ದರ್ಜೆ ಸಹಾಯಕರು, ಕೃಉಮಾಸ, ಗಂಗಾವತಿ | ಪ್ರಥಮ ದರ್ಜೆ ಸಹಾಯಕರು ಎಂಬ ಪದನಾಮವನ್ನು ಲೆಕ್ಕಿಗರು (ದರ್ಜೆ-2) ಎಂದು ಪದನಾಮೀಕರಿಸುವುದು |
| 3 | ಮಾರುಕಟ್ಟೆ ಸಹಾಯಕ | 3000-5450 | 02 | 1. ಮಾರುಕಟ್ಟೆ ಸಹಾಯಕ ಕೃಉಮಾಸ, ದಾವಣಗೆರೆ<br>2. ಮಾರುಕಟ್ಟೆ ಸಹಾಯಕ ಕೃಉಮಾಸ, ಶಿವಮೊಗ್ಗ | ದಾವಣಗೆರೆ ಹಾಗೂ ಶಿವಮೊಗ್ಗ ಸಮಿತಿಯಿಂದ ಒಂದೊಂದು ಮಾರುಕಟ್ಟೆ ಸಹಾಯಕ ಹುದ್ದೆ ಸ್ಥಳಾಂತರಿಸುವುದು. |
| 4 | ಸಿಪಾಯಿ | 2500-3650 | 02 | ಸಿಪಾಯಿ,<br>ಕೃಉಮಾಸ, ದಾವಣಗೆರೆ | ದಾವಣಗೆರೆ ಸಮಿತಿಯಿಂದ 2 ಸಿಪಾಯಿ ಹುದ್ದೆಗಳನ್ನು ಸ್ಥಳಾಂತರಿಸುವುದು. |

ಅದಲ್ಲದೆ, ಮೇಲ್ಕಂಡ ಹುದ್ದೆಗಳನ್ನು ಸಂಬಂಧಪಟ್ಟ ಸಮಿತಿಗಳಿಂದ ಸ್ಥಳಾಂತರಿಸಿ, ಪದನಾಮೀಕರಿಸಿ ಆದೇಶ ವಿತರಿಸಲು ಹಾಗೂ ಜಗಳೂರು ಸಮಿತಿಯ ಕಾರ್ಯದರ್ಶಿ ಹುದ್ದೆಯನ್ನು ವೇತನ ತೆಗೆಯುವ **"ಬಟವಾಡೆ ಅಧಿಕಾರಿ"** ಎಂದು ಘೋಷಿಸಲು ಹಾಗೂ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ ಇಲ್ಲಿಂದ ಜಗಳೂರು ಸಮಿತಿ ಸ್ಥಳಾಂತರಿಸಲಾಗುವ ಪ್ರಥಮ ದರ್ಜೆ ಸಹಾಯಕ ಹುದ್ದೆಯನ್ನು **ಲೆಕ್ಕಿಗರು ದರ್ಜೆ-2** ಎಂದು ಪದನಾಮೀಕರಿಸಲು ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ನಿಯಮಗಳಾನುಸಾರ ಸಮಗ್ರವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ / 252 / ಎಂಆರ್‌ಇ 2003, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಮೇಲ್ಕಂಡ ಸಂದರ್ಭದಲ್ಲಿ, ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಗಣಿಸಿದ ಸರ್ಕಾರವು, ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಈ ಕೆಳಕಂಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಂದ ಹುದ್ದೆಗಳನ್ನು ಸಿಬ್ಬಂದಿ ಸಮೇತ ತಕ್ಷಣದಿಂದ ಅನ್ವಯಿಸುವಂತೆ ಮತ್ತು ಮುಂದಿನ ಆದೇಶದವರೆವಿಗೂ ಈ ಮೂಲಕ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಜಗಳೂರು ಇಲ್ಲಿಗೆ ಸ್ಥಳಾಂತರಿಸಿ ಆದೇಶಿಸಿದೆ.

| ಕ್ರ ಸಂ. | ಹುದ್ದೆಯ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಜಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಸಮಿತಿಗಳಿಂದ ಹುದ್ದೆಗಳನ್ನು ಸ್ಥಳಾಂತರಿಸಲಾಗಿದೆ. |
|---|---|---|---|---|
| 1 | ಕಾರ್ಯದರ್ಶಿ | 5575-10620 | 01 | ಸಹಾಯಕ ಕಾರ್ಯದರ್ಶಿ ಕೃಉಮಾಸ, ದಾವಣಗೆರೆ |
| 2 | ಲೆಕ್ಕಿಗರು ದರ್ಜೆ - 2 | 3850-7050 | 01 | ಪ್ರಥಮ ದರ್ಜೆ ಸಹಾಯಕರು, ಕೃಉಮಾಸ, ಗಂಗಾವತಿ |
| 3 | ಮಾರುಕಟ್ಟೆ ಸಹಾಯಕ | 3000-5450 | 02 | 1. ಮಾರುಕಟ್ಟೆ ಸಹಾಯಕ ಕೃಉಮಾಸ, ದಾವಣಗೆರೆ<br>2. ಮಾರುಕಟ್ಟೆ ಸಹಾಯಕ ಕೃಉಮಾಸ, ಶಿವಮೊಗ್ಗ |
| 4 | ಸಿಪಾಯಿ | 2500-3650 | 02 | ಸಿಪಾಯಿ,<br>ಕೃಉಮಾಸ, ದಾವಣಗೆರೆ |

ದಾವಣಗೆರೆ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಇಲ್ಲಿಂದ ಜಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸ್ಥಳಾಂತರಿಸಲಾದ **ಸಹಾಯಕ ಕಾರ್ಯದರ್ಶಿ** ಹುದ್ದೆಯನ್ನು ತಕ್ಷಣದಿಂದ ಅನ್ವಯಿಸುವಂತೆ **"ಕಾರ್ಯದರ್ಶಿ"** ಎಂದು ಪದನಾಮೀಕರಿಸಲಾಗಿದೆ. ಅದಲ್ಲದೆ, ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಜಗಳೂರು ಇವರನ್ನು ವೇತನ ತೆಗೆಯುವ **"ಬಟವಾಡೆ ಅಧಿಕಾರಿ"** ಎಂದು ಘೋಷಿಸಲಾಗಿದೆ. ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ ಇಲ್ಲಿಂದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಜಗಳೂರು ಇಲ್ಲಿಗೆ ಸ್ಥಳಾಂತರಿಸಲಾದ ಪ್ರಥಮ ದರ್ಜೆ ಸಹಾಯಕರ ಹುದ್ದೆಯನ್ನು ಲೆಕ್ಕಿಗರು (ದರ್ಜೆ-2) ಎಂದು ಪದನಾಮೀಕರಿಸಲಾಗಿದೆ.

ಈ ಬಗ್ಗೆ ಸಿಬ್ಬಂದಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: 3475 - ಇತರೆ ಆರ್ಥಿಕ ಸೇವೆಗಳು, 107- ಮಾರುಕಟ್ಟೆಗಳ ವಿನಿಮಯ, 02 - ಮಾರುಕಟ್ಟೆ ಸಮಿತಿಗಳು (ಯೋಜನೇತರ) (3475-00-107-0-02) ರ ಅಡಿಯಲ್ಲಿ ಭರಿಸಲಾಗುವುದು.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 320 ಆಂಅಸ 2004(ಎ) ದಿನಾಂಕ: 04.02.2005 ರಲ್ಲಿನ ಆಂತರಿಕ ಆರ್ಥಿಕ ಸಲಹೆಗಾರರು ಅಪಜಿ ಮತ್ತು ಸಹಕಾರ ಇಲಾಖೆ ಇವರ ಸಹಮತಿ ಹಾಗೂ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 142 ವೆಚ್ಚ-2/05 ದಿನಾಂಕ: 06.10.2005 ರನ್ವಯ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 178

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ಶೇಷಾದ್ರಿಪುರಂ, ಬೆಂಗಳೂರು ಇಲ್ಲಿ ಔಷಧಿ ದುರುಪಯೋಗವಾಗಿರುವ ಬಗ್ಗೆ ಇಲಾಖಾ ವಿಚಾರಣೆ ಕುರಿತು - ಆದೇಶ.

**ಓದಲಾಗಿದೆ:** ತಾ: 14.02.2002 ಮತ್ತು 09.04.2003 ಸಂಖ್ಯೆ: ಕಾಇ 1130 ಇಎಸ್ಐ 98ರ ಕಾರ್ಮಿಕ ಇಲಾಖೆಯ ಅನಧಿಕೃತ ಟಿಪ್ಪಣಿ.

**ಪ್ರಸ್ತಾವನೆ:**

1. ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾಶಾಸ್ತ್ರ ಉಪನ್ಯಾಸಕ ಡಾ: ಕೆ.ಎನ್. ನಾಗರಾಜ್ ರವರು ಈ ಹಿಂದೆ ಇಎಸ್ಐ ಇಲಾಖೆಯಲ್ಲಿ ಐಎಂಒ ಹುದ್ದೆಯಲ್ಲಿ ಸೇವಾ ನಿರತರಾಗಿದ್ದರು. 1982ರ ಫೆಬ್ರವರಿಯಿಂದ ತಾ: 06.02.85 ರವರೆಗಿನ ಅವಧಿಯಲ್ಲಿ ಕೇಂದ್ರ ಉಗ್ರಾಣ ಔಷಧ ಮಳಿಗೆಯಿಂದ ಔಷಧಗಳ ದುರುಪಯೋಗದ ಮೇಲೆ ಇಲಾಖಾ ವಿಚಾರಣೆ ನಡೆಸಲಾಗಿತ್ತು. ಇಲಾಖಾ ವಿಚಾರಣಾ ವರದಿಯನ್ನಾಧರಿಸಿ ತಾ: 13.07.1996 ಸಂಖ್ಯೆ: ಕಾಇ 275 LSI 85 ರ ಸರ್ಕಾರಿ ಆದೇಶದಲ್ಲಿ ಡಾ: ಕೆ.ಎನ್. ನಾಗರಾಜ್‌ರವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ನೇಮಕಾತಿಗೊಂಡಿದ್ದರಿಂದ ಅವರನ್ನು ಹೊರತುಪಡಿಸಿ ಇನ್ನುಳಿದ 3 ಆಪಾದಿತರಿಗೆ ತಲಾ 3 ವಾರ್ಷಿಕ ಇಂಕ್ರಿಮೆಂಟ್‌ಗಳನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವ ಮತ್ತು ಪ್ರತಿಯೊಬ್ಬರಿಂದ 11,594-60 ರೂ.ಗಳನ್ನು ವಸೂಲಾತಿ ಮಾಡುವ ದಂಡನೆಯನ್ನು ವಿಧಿಸಲಾಗಿತ್ತು ಅದನ್ನು KAT ಯಲ್ಲಿ ಪ್ರಶ್ನಿಸಲಾಗಿತ್ತು. ಅದರ ತೀರ್ಪಿನ ಅನುಸಾರ ತಾ: 04.01.94 ಸಂಖ್ಯೆ: ಆಇ 1130 LSI 98 ಸರ್ಕಾರಿ ಆದೇಶದಲ್ಲಿ ತಾ: 12.07.96ರ ಸರ್ಕಾರಿ ಆದೇಶವನ್ನು ರದ್ದುಗೊಳಿಸಲಾಗಿತ್ತು.

2. ಈ ಪ್ರಕರಣವು 1982ರ ಫೆಬ್ರವರಿಯಿಂದ 1985ರ ಅವಧಿಗೆ ಸಂಬಂಧಿಸಿದಂತೆ ಸುಮಾರು 20 ವರ್ಷಗಳಷ್ಟು ಹಳೆಯದಾಗಿದೆ. ಡಾ: ಕೆ.ಎನ್. ನಾಗರಾಜ್ ರವರಿಂದ 3500 ರೂ.ಗಳನ್ನು ವಸೂಲಿ ಮಾಡುವುದಲ್ಲದೆ ಸೂಕ್ತ ದಂಡನೆಯನ್ನು ವಿಧಿಸಲು ಕೋರಲಾಗಿದೆ. ಇನ್ನುಳಿದ 3 ಇಎಸ್ಐ ನೌಕರರು ಈಗಾಗಲೇ ತಾ: 13.07.96ರ ಸರ್ಕಾರಿ ಆದೇಶವನ್ನು ಪ್ರಶ್ನಿಸಿದ್ದರು ಅದನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ರದ್ದುಗೊಳಿಸಿದೆ. ಸದರಿ ತೀರ್ಪಿನನುಸಾರ ತಾ: 04.01.99ರ ಸರ್ಕಾರಿ ಆದೇಶದಲ್ಲಿ ಅವರಿಗೆ ವಿಧಿಸಲಾಗಿದ್ದ ದಂಡನೆಗಳನ್ನು ರದ್ದುಪಡಿಸಲಾಗಿದೆ. ಇತರೆ ಸವಲತ್ತುಗಳನ್ನು ಅವರಿಗೆ ಮಂಜೂರು ಮಾಡಲಾಗಿದೆ.

3. ಈಗ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ನಿಯೋಜನೆ ಮೇಲಿರುವ ಶಸ್ತ್ರ ಚಿಕಿತ್ಸಾ ಶಾಸ್ತ್ರ ಉಪನ್ಯಾಸಕರಾಗಿರುವ ಡಾ: ಕೆ.ಎನ್. ನಾಗರಾಜು ರವರು KAT ಯನ್ನು ಸಂಪರ್ಕಿಸಿಲ್ಲ ಎಂಬ ಏಕೈಕ ಕಾರಣದ ಮೇಲೆ ಅವರಿಗೆ ಈಗ ಯಾವುದೇ ದಂಡನೆ ವಿಧಿಸುವುದು ಸಮಂಜಸವಲ್ಲ ಮತ್ತು ಸಮರ್ಥನೀಯವೂ ಅಲ್ಲ. ತಾ: 27.03.1997ರ KAT ತೀರ್ಪಿನ ಬೆಳಕಿನಲ್ಲಿ ಶಿಸ್ತುಕ್ರಮದ ಮುಂದಿನ ನಡವಳಿಯನ್ನು ಕೈಬಿಡಲಾಗಿದೆ ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 99 ಎಂಸಿಎಲ್ 2004, ಬೆಂಗಳೂರು, ದಿನಾಂಕ: 07ನೇ ಜನವರಿ 2006**

5. ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ನಿಯೋಜನೆ ಮೇಲಿರುವ ಶಸ್ತ್ರ ಚಿಕಿತ್ಸಾಶಾಸ್ತ್ರ ಉಪನ್ಯಾಸಕ ಡಾ: ಕೆ.ಎನ್. ನಾಗರಾಜ್ ರವರ ವಿರುದ್ಧ ಹೂಡಿರುವ ಶಿಸ್ತುಕ್ರಮದ ಮುಂದಿನ ನಡವಳಿಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 183

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎಂ.ಎಸ್. ಕೋಟೇಣ್ಣವರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಮುದ್ದೇಬಿಹಾಳ, ಬಿಜಾಪುರ ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (2) 36 : 2004-05 ದಿನಾಂಕ: 11.07.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಡಾ: ಎಂ.ಎಸ್. ಕೋಟೇಣ್ಣವರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಮುದ್ದೇಬಿಹಾಳ, ಬಿಜಾಪುರ ಜಿಲ್ಲೆ, ಇವರು ದಿನಾಂಕ: 04.03.2004 ರಂದು ಸರ್ಕಾರಿ ಸೇವೆಗೆ ಸೇರಿದ್ದು ದಿನಾಂಕ: 01.09.2004 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬಿಜಾಪುರ ಇವರು ನೀಡಿರುವ ಕಾರಣ ಕೇಳುವ ನೋಟೀಸಿಗೆ ಸದರಿ ವೈದ್ಯರು ರಕ್ಷಣಾ ಹೇಳಿಕೆಯನ್ನು ಕೂಡಾ ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರಿ ವೈದ್ಯರು ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿಯಾಗಿ ಕರ್ತವ್ಯ ಲೋಪ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6(2) ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 997 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಎಂ.ಎಸ್. ಕೋಟೇಣ್ಣವರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಿಂಬರ್ಗ, ಮುದ್ದೇಬಿಹಾಳ, ಬಿಜಾಪುರ ಜಿಲ್ಲೆ, ಇವರು ದಿನಾಂಕ: 01.09.2004 ರಿಂದ ಅನಧಿಕೃತ ಗೈರುಹಾಜರಾಗಿ ಖಾಯಂ ಪೂರ್ವ

ಸೇವಾವಧಿಯಲ್ಲಿ ಕರ್ತವ್ಯಕ್ಕೆ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 01.09.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6(2) ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 184

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು-1).

## ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 142 ಸಿಎಸ್‌ಇ 2005, ದಿನಾಂಕ: 9.5.2005.
2) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 142 ಸಿಎಸ್‌ಇ 2005, ದಿನಾಂಕ: 23.11.2005.
3) ವಾಣಿಜ್ಯ ತೆರಿಗೆ ಆಯುಕ್ತರು, ಬೆಂಗಳೂರು, ಇವರ ಪತ್ರ ಸಂ. ವ್ಯಾಟ್:ಸಿಆರ್-11:03-04 (ಪಾರ್ಟ್ ಫೈಲ್), ದಿನಾಂಕ: 03.11.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1) ರಲ್ಲಿರುವ ಆದೇಶದಲ್ಲಿ ರಾಜ್ಯಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಒಂದು ವರ್ಷದ ಅವಧಿಗೆ ರಚಿಸಲಾಗಿದೆ. ನಂತರ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಬೃಹತ್ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ ಮತ್ತು ಮೂಲ ಸೌಲಭ್ಯ ಹಾಗೂ ಹಣಕಾಸು ಸಚಿವರ ಅಧ್ಯಕ್ಷತೆಯಲ್ಲಿ ಸದರಿ ಸಮಿತಿಯನ್ನು ಪುನರ್ ರಚಿಸಲಾಗಿದೆ.

ರಾಜ್ಯಮಟ್ಟ ಸಮಿತಿಯಲ್ಲಿ ಬೆಂಗಳೂರು, ಮೈಸೂರು, ಹುಬ್ಬಳ್ಳಿ, ಬೆಳಗಾಂ, ಗುಲ್ಬರ್ಗಾ ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆಗಳನ್ನು ಸದಸ್ಯರನ್ನಾಗಿ ಮಾಡಿರುವುದರಿಂದ ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರತಿನಿಧಿಸುವ ಕೆನರಾ ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆ, ಮಂಗಳೂರು ಇವರನ್ನು ಸಹ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯಲ್ಲಿ ಸದಸ್ಯರನ್ನಾಗಿ ಮಾಡಬಹುದೆಂದು ಮೇಲೆ ಓದಲಾಗಿರುವ ಕ್ರ.ಸಂ. (3) ರ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು, ಬೆಂಗಳೂರು ರವರು ತಿಳಿಸಿರುತ್ತಾರೆ.

ವಾಣಿಜ್ಯ ತೆರಿಗೆ ಆಯುಕ್ತರು, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 142 ವಾತೆಸಿ 2005, ಬೆಂಗಳೂರು, ದಿನಾಂಕ: 13ನೇ ಜನವರಿ 2006**

ಪ್ರಸ್ತಾವನೆಯಲ್ಲಿ ಹೇಳಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು, ಅಧ್ಯಕ್ಷರು, ಕೆನರಾ ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆ, ಮಂಗಳೂರು, ಇವರನ್ನು ಕರ್ನಾಟಕ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯ ಸದಸ್ಯರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 185

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಾತೆ-2).

## ಸಹಕಾರ ಸಚಿವಾಲಯ

**ವಿಷಯ:** ನೇರಳೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚನ್ನಪಟ್ಟಣ (ತಾ) ಈ ಸಹಕಾರ ಸಂಘದ ಆಡಳಿತ ಮಂಡಳಿಗೆ ವಿಶೇಷಾಧಿಕಾರಿಯವರ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ಪತ್ರ ಸಂಖ್ಯೆ: ಡಿಎವೈ-1, ಜೆಎಂಸಿ 110/03-04 ದಿನಾಂಕ: 29.11.2005.

**ಪ್ರಸ್ತಾವನೆ:**

ನೇರಳೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ನೇರಳೂರು ಸಂಘಕ್ಕೆ ರಾಮನಗರದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರಡಿ ವಿಶೇಷಾಧಿಕಾರಿಯನ್ನು ದಿನಾಂಕ: 31.08.2002 ರಂದು 6 ತಿಂಗಳ ಅವಧಿಗೆ ನೇಮಿಸಿದ್ದು, ಸದರಿ ವಿಶೇಷಾಧಿಕಾರಿಯು ದಿನಾಂಕ 07.10.2002 ರಂದು ಪ್ರಭಾರ ವಹಿಸಿಕೊಂಡಿದ್ದು, 6 ತಿಂಗಳ ಅವಧಿಯು ದಿನಾಂಕ 06.04.2003ಕ್ಕೆ ಮುಕ್ತಾಯವಾಗಿದ್ದು, ತದನಂತರದ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 07.04.2003 ರಿಂದ 06.04.2004 ರವರೆಗೆ ವಿಸ್ತರಿಸಿರುತ್ತಾರೆ. ಸದರಿ ಆಡಳಿತ ಮಂಡಳಿಗೆ ದಿನಾಂಕ: 03.10.2004 ರಂದು ಚುನಾವಣೆ ನಡೆದಿದ್ದು, ದಿನಾಂಕ: 11.10.2004 ರಂದು ಅಧ್ಯಕ್ಷರ ಚುನಾವಣೆಯು ನಡೆದಿರುವ ಪ್ರಯುಕ್ತ, ಒಂದೂವರೆ ವರ್ಷದ ನಂತರದ ಅವಧಿ ಅಂದರೆ ದಿನಾಂಕ: 06.04.2004 ರಿಂದ 11.10.2004 ರವರೆಗೆ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸದರಿ ಸಂಘದ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ: 06.04.2004 ರಿಂದ 11.10.2004 ರವರೆಗೆ ವಿಸ್ತರಿಸಲು ಅನುವಾಗುವಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 97 ಸಿಎಲ್ಎಂ 2004, ಬೆಂಗಳೂರು, ದಿನಾಂಕ: ನೇ 17ಜನವರಿ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ನೇರಳೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ನೇರಳೂರು ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ,

"31ರ ಪ್ರಕರಣದಲ್ಲಿ.

(1) ನೇ ಉಪ ಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಹತ್ತುಂಭತ್ತು (19) ತಿಂಗಳು" ಎಂಬುದಾಗಿ ಪ್ರತಿ ಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 31(1)ಕ್ಕೆ ಮಾಡಿದ ಈ ಮಾರ್ಪಾಟು ದಿನಾಂಕ: 11.10.2004ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದನಂತರ ಈ ಆದೇಶವ ಮಾರ್ಪಾಡಿಗೆ ಮದೊಲು ಜಾರಿಯಲ್ಲಿದ್ದಂತೆ ಸದರಿ 31(1) ನೇ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 186

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಮಲ್ಲಿಕಾರ್ಜುನ ಕೀರ್ತಿ, ಸ್ತ್ರೀರೋಗ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಭರಮಸಾಗರ, ಚಿತ್ರದುರ್ಗ ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (1) 45 : ಚಿತ್ರದುರ್ಗ : 2004-05 ದಿನಾಂಕ: 25.07.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳುರು, ಇವರ ಪ್ರಸ್ತಾವನೆಯಲ್ಲಿ ಡಾ: ಮಲ್ಲಿಕಾರ್ಜುನ ಕೀರ್ತಿ, ಇವರು ದಿನಾಂಕ: 26.02.2004 ರಿಂದ ಸ್ತ್ರೀರೋಗ ತಜ್ಞರಾಗಿ ಸಮುದಾಯ ಆರೋಗ್ಯ ಕೇಂದ್ರ, ಭರಮಸಾಗರ, ಚಿತ್ರದುರ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸಿದ್ದು ನಂತರ ದಿನಾಂಕ: 18.10.2004 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ನಿರ್ದೇಶನಾಲಯದ ಕಾರಣ ಕೇಳುವ ನೋಟೀಸಿಗೆ ಸದರಿ ವೈದ್ಯರು ರಕ್ಷಣಾ ಹೇಳಿಕೆ ಸಲ್ಲಿಸಿ, ದೃಢೀಕರಣವಿಲ್ಲದೇ ವೈದ್ಯಕೀಯ ಕಾರಣದ ಮೇಲೆ ರಜೆಯನ್ನು ಕೋರಿರುತ್ತಾರೆ. ಆದ್ದರಿಂದ ಸದರಿ ವೈದ್ಯರು ಅನಧಿಕೃತ ಗೈರುಹಾಜರಿಯಾಗಿ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯ ಲೋಪ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6(1)2 ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 916 ಹೆಚ್‌ಎಸ್‌ಎಚ್ 2005, ಬೆಂಗಳೂರು, ದಿನಾಂಕ: 12ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಮಲ್ಲಿಕಾರ್ಜುನ ಕೀರ್ತಿ, ಸ್ತ್ರೀರೋಗ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಭರಮಸಾಗರ, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ: 18.10.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 18.10.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977 ರ ನಿಯಮ 6(1)2 ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 201

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಪ್ರತಿಮಾ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹೊಸನಗರ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂ: ಆಕುಕ 122 ಹೆಚ್‌ಎಸ್‌ಹೆಚ್ 2004 ದಿ: 24.6.04.
2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ ಬೆಂವಿ : ಶಿವಮೊಗ್ಗ : 10 : 2005-06 ದಿನಾಂಕ: 29.06.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಡಾ: ಪ್ರತಿಮಾ, ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಸದರಿ ಅಧಿಸೂಚನೆಯನ್ವಯ ದಿನಾಂಕ: 13.7.2004 ರಂದು ಸಾರ್ವಜನಿಕ ಆಸ್ಪತ್ರೆ ಹೊಸನಗರ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ, ತದನಂತರ ದಿನಾಂಕ: 15.7.2004 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ರೂಲ್ಸ್ 1977ರ ಉಪ ನಿಯಮ 6(1) 2ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 961 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 19ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ; ಪ್ರತಿಮಾ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹೊಸನಗರ ಜಿಲ್ಲೆ ಇವರು ದಿನಾಂಕ: 15.7.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 15.7.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977 ರ ನಿಯಮ 6(1) 2ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 202

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** 2004-2005ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಶೀರ್ಷಿಕೆಯಡಿ ಡಿಆರ್‌ಡಿಎ ಕಛೇರಿ ಕಟ್ಟಡ ನಿರ್ಮಿಸಲು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲಾಗಿದ್ದ ರಾಜ್ಯದ 2ನೇ ಕಂತಿನ ಅನುದಾನ ರೂ. 3,00,000/- ಗಳನ್ನು 2005-06ನೇ ಸಾಲಿನಲ್ಲಿ ಪುರ್ನಮೌಲ್ಯೀಕರಿಸಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ.ಡಿಆರ್‌ಡಿಎ 03, ದಿನಾಂಕ: 31.03.2005.
2) ಮುಖ್ಯಕಾರ್ಯದರ್ಶಿ ನಿರ್ವಾಹಕ ಅಧಿಕಾರಿಗಳು, ಗುಲ್ಬರ್ಗಾ ಜಿಲ್ಲಾಪಂಚಾಯತ್‌ರವರ ಪತ್ರದ ಸಂಖ್ಯೆ: ಜಿಪಂಗು. ಮುಲೆಅ. 2005-06, ದಿನಾಂಕ: 04.04.2005, 11/12.08.2005 ಮತ್ತು 06/8.09.2005.
3) ಸರ್ಕಾರದ ಆದೇಶದ ಸಂಖ್ಯೆ: ಎಫ್‌ಡಿ 07 ಜಿಪಿಎ 2003 ದಿನಾಂಕ 14.07.05.

**ಪ್ರಸ್ತಾವನೆ:**

ರಾಜ್ಯ ಸರ್ಕಾರವು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಡಿಆರ್‌ಡಿಎ ಕಛೇರಿ ಕಟ್ಟಡ ಕಟ್ಟುವ ಸಲುವಾಗಿ ಓದಲಾಗಿದೆ (1)ರ ಆದೇಶದಲ್ಲಿ ರೂ. 3,00,000/- ಗಳ ಅನುದಾನ ಬಿಡುಗಡೆ ಮಾಡಿತ್ತು. ಇದನ್ನು ದಿನಾಂಕ 31.03.2005 ರಂದು ಗಣಕ ಜಾಲದಲ್ಲಿಯೂ ಅಳವಡಿಸಲಾಗಿತ್ತು. ಆದರೆ ಗುಲ್ಬರ್ಗಾ ಜಿಲ್ಲಾ ಪಂಚಾಯತಿಯು ಓದಲಾಗಿದೆ (2) ರಲ್ಲಿ ಜಿಲ್ಲಾ ಖಜಾನಿಯಲ್ಲಿ ಈ ಅನುದಾನವನ್ನು ಡ್ರಾ ಮಾಡಲು ಸಾಧ್ಯವಾಗಿಲ್ಲವೆಂದು ತಿಳಿಸಿ, 2005-2006 ನೇ ಸಾಲಿನಲ್ಲಿ ನವೀಕರಿಸುವಂತೆ ಕೋರಿದೆ. ಸರ್ಕಾರವು ಇದನ್ನು ಪರಿಗಣಿಸಿ ಓದಲಾಗಿದೆ (3) ರನ್ವಯ, ಗುಲ್ಬರ್ಗಾ ಜಿಲ್ಲಾಪಂಚಾಯತಿಗೆ ರೂ. 3,00,000/- (ರೂಪಾಯಿ ಮೂರು ಲಕ್ಷ ಮಾತ್ರ) ಗಳನ್ನು ಪುರ್ನಮೌಲ್ಯೀಕರಿಸಿ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2005**

ರಾಜ್ಯ ಸರ್ಕಾರವು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಡಿಆರ್‌ಡಿಎ ಕಛೇರಿ ಕಟ್ಟಡ ಕಟ್ಟುವ ಸಲುವಾಗಿ 2004-05 ನೇ ಸಾಲಿನಲ್ಲಿ ಬಿಡುಗಡೆ ಮಾಡಿದ್ದ ರೂ. 3,00,000/- (ರೂಪಾಯಿ ಮೂರು ಲಕ್ಷ ಮಾತ್ರ) ಗಳ ಅನುದಾನವನ್ನು 2005-06ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಿಂದ ಪುರ್ನಮೌಲ್ಯೀಕರಿಸಿ ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(1) 2004-05ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗಿದ್ದ ಸದರಿ ಅನುದಾನವನ್ನು ಡ್ರಾ ಮಾಡದೇ ಇರುವ ಬಗ್ಗೆ ಖಜಾನೆಯಿಂದ ನಾನ್-ಡ್ರಾಯಲ್ ಪ್ರಮಾಣಪತ್ರ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ಸರ್ಕಾರದ ದಿನಾಂಕ 31.03.2005ರ ಆದೇಶದಲ್ಲಿನ ಎಲ್ಲಾ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

(3) ಸದರಿ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಿ ಕಛೇರಿ ಕಟ್ಟಡಕ್ಕಾಗಿ ಮಾತ್ರ ಬಳಕೆ ಮಾಡತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ ಗ್ರಾಅಪ 452 ಪಿಬಿಎಸ್ 05 ದಿನಾಂಕ: 09.11.2005ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯಮರ್**

ಪಿ.ಆರ್. 204

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಗ್ರಾಅಪ 59 ಎಸ್‌ಜೆವೈ 05, ಬೆಂಗಳೂರು, ದಿನಾಂಕ: 13ನೇ ಜನವರಿ 2006**

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 59 ಎಸ್‌ಜೆವೈ 2005, ಬೆಂಗಳೂರು, ದಿನಾಂಕ: 03.01.2006 ರೊಂದಿಗೆ ಲಗತ್ತಿಸಿದ ಅನುಬಂಧ 1 ರಲ್ಲಿನ ವೇಳಾಪಟ್ಟಿಯನ್ನು ಹಿಂತೆಗೆದುಕೊಳ್ಳಲಾಗಿದೆ. ಇದರ ಬದಲಾಗಿ ಇದರೊಂದಿಗೆ ಲಗತ್ತಿಸಿರುವ ಅನುಬಂಧ 1 ರ ವೇಳಾಪಟ್ಟಿಯಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯಮರ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ - 1**

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 59 ಎಸ್‌ಜೆವೈ 2005, ಬೆಂಗಳೂರು, ದಿನಾಂಕ: 13ನೇ ಜನವರಿ 2006**

**ವೇಳಾಪಟ್ಟಿ**

| | |
|---|---|
| 7 ರಿಂದ 26ನೇ ಜನವರಿ, 2006 ವರೆಗೆ | ಸರ್ವಕುಟುಂಬ ಸಮೀಕ್ಷೆಯನ್ನು ಅಂತಿಮ ಗೊಳಿಸಲು ಹಾಗೂ ಅನುಮೋದನೆ ನೀಡಲು ಗ್ರಾಮಸಭೆಗಳನ್ನು ನಡೆಸುವುದು. |
| 28ನೇ ಜನವರಿ, 2006 | ಗ್ರಾಮಪಂಚಾಯತಿಗಳಲ್ಲಿ ಸರ್ವಕುಟುಂಬ ಸಮೀಕ್ಷೆಯ ಅಂತಿಮ ಪಟ್ಟಿಯನ್ನು ಪ್ರದರ್ಶಿಸುವುದು |
| 29ನೇ ಜನವರಿ, 2006 | ತಾಲ್ಲೂಕಿನ ಕಾರ್ಯನಿರ್ವಾಹಕ ಅಧಿಕಾರಿಯವರಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಲು ಪ್ರಾರಂಭದ ದಿನಾಂಕ |
| 28ನೇ ಫೆಬ್ರವರಿ, 2006 | ತಾಲ್ಲೂಕಿನ ಕಾರ್ಯನಿರ್ವಾಹಕ ಅಧಿಕಾರಿ ಯವರಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಲು ಕೊನೆಯ ದಿನಾಂಕ |
| 10ನೇ ಮಾರ್ಚ್, 2006 | ಆಕ್ಷೇಪಣೆಗಳನ್ನು ಕೇಳಲು ಹಾಗೂ ವಿಚಾರಣೆಯನ್ನು ಅಂತಿಮಗೊಳಿಸಲು ಕೊನೆಯ ದಿನಾಂಕ |
| 11ನೇ ಮಾರ್ಚ್, 2006 | ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಲು ಪ್ರಾರಂಭದ ದಿನಾಂಕ |
| 28ನೇ ಮಾರ್ಚ್, 2006 | ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಲು ಕೊನೆಯ ದಿನಾಂಕ |
| 7ನೇ ಏಪ್ರಿಲ್, 2006 | ಮೇಲ್ಮನವಿಗಳ ಆಕ್ಷೇಪಣೆಗಳನ್ನು ಕೇಳಲು ಹಾಗೂ ವಿಚಾರಣೆಯನ್ನು ಅಂತಿಮ ಗೊಳಿಸಲು ಕೊನೆಯ ದಿನಾಂಕ |
| 10ನೇ ಏಪ್ರಿಲ್, 2006 | ಅಂತಿಮ ಬಿಪಿಎಲ್ ಪಟ್ಟಿಯನ್ನು ಪ್ರದರ್ಶಿಸುವ ದಿನಾಂಕ |

**ಟಿಪ್ಪಣಿ :**

ಅರ್ಜಿ / ಮೇಲ್ಮನವಿಗಳು ಸ್ವೀಕೃತವಾದ ದಿನಾಂಕದಿಂದ ಹತ್ತು ದಿನಗಳೊಳಗೆ ವಿಚಾರಣೆಯನ್ನು ಅಂತಿಮಗೊಳಿಸತಕ್ಕದ್ದು.

**ಜಿ.ಬಿ. ಹಿರೇಮಣಿಯಮಠ್**

ಪಿ.ಆರ್. 205

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಬಿಜಾಪುರದಲ್ಲಿ ನೂತನವಾಗಿ ಸ್ಥಾಪಿತವಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣಕ್ಕಾಗಿ ಆಡಳಿತಾತ್ಮಕ ಅನುಮೋದನೆಗೆ ಮಾರ್ಪಡಿಸಿದ ಆದೇಶ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ : ಇಡಿ : 327 : ಯೋಸಕ 2005 : ದಿ. 24.10.2005. (ಇಡಿ : 56 : ಸ್ಕೀಮರ (ಯುನಿಕ್) 2005 : ದಿ. 24.10.2005)
2) ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರಸಂಖ್ಯೆ: ಕಾ.ಶಿ.ಇ-12-ಯೋಜನೆ-2001-02 / ದಿ. 03.01.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 24.10.2005ನೇ ಸರ್ಕಾರಿ ಆದೇಶದಲ್ಲಿ 2005-06ನೇ ಸಾಲಿಗೆ ಬಿಜಾಪುರದಲ್ಲಿ ನೂತನವಾಗಿ ಸ್ಥಾಪಿತವಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣಕ್ಕಾಗಿ ಲೆಕ್ಕಶೀರ್ಷಿಕೆ : 2202-03-103-2-02-059 (ಪಿ.ವಿ)ರ ಯೋಜನೆಯಡಿಯಲ್ಲಿ ರೂ. 80.00 ಲಕ್ಷಗಳನ್ನು (ರೂಪಾಯಿ ಎಂಭತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ. ಹಾಗೂ ಕಟ್ಟಡ ಕಾಮಗಾರಿಯನ್ನು ನಿರ್ವಹಿಸಲು ಕರ್ನಾಟಕ ಗೃಹ ಮಂಡಳಿಗೆ ಅನುಮತಿ ನೀಡಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ದಿ. 03.01.2006. ಪತ್ರದಲ್ಲಿ ಸದರಿ ಕಾಲೇಜು ಕಟ್ಟಡ ನಿರ್ಮಾಣವನ್ನು ಕರ್ನಾಟಕ ಗೃಹ ಮಂಡಳಿಗೆ ನೇರವಾಗಿ ವಹಿಸಲು ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 2000ರ 4 ಜಿ ಅಡಿಯಲ್ಲಿ ವಿನಾಯಿತಿ ನೀಡಲು ಕೋರಿಕೊಳ್ಳಲಾಗಿತ್ತು. ಆದರೆ 4 ಜಿ ಅಡಿಯಲ್ಲಿ ವಿನಾಯಿತಿ ದೊರಕುವುದು ಸಾಧ್ಯವಿಲ್ಲದ ಕಾರಣ, ಬಿಜಾಪುರದ ನೂತನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹಾಗೂ ಮೈಸೂರಿನ ಸರ್ಕಾರಿ ಮಹಿಳಾ ಕಾಲೇಜಿನ ಕಟ್ಟಡ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಗೆ ವಹಿಸಲು ಪರಿಷ್ಕೃತ ಆದೇಶವನ್ನು ಹೊರಡಿಸಿ ಆಡಳಿತಾತ್ಮಕ ಅನುಮೋದನೆ ನೀಡಿ ಕಟ್ಟಡ ನಿರ್ಮಾಣಕ್ಕೆ ಒದಗಿಸಿರುವ ಅನುದಾನವನ್ನು ಡ್ರಾ ಮಾಡಿ ಲೋಕೋಪಯೋಗಿ ಇಲಾಖೆಗೆ ಡಿಪಾಜಿಟ್ ಮಾಡಲು ಹಾಗೂ ಈ ಹಣಕಾಸಿನ ವರ್ಷದಲ್ಲೇ ಬಳಸಿಕೊಂಡು ಕಟ್ಟಡ ನಿರ್ಮಾಣ ಮಾಡಲು ಸರ್ಕಾರದ ಆದೇಶ ನೀಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ : 327 : ಯೋಸಕ 2005 : ಬೆಂಗಳೂರು, ದಿನಾಂಕ: 23ನೇ ಜನವರಿ 2006**

**(ಇಡಿ : 5 : ಸ್ಕೀಮರ (ಯುನಿಕ್) 2005, ದಿ. 23ನೇ ಜನವರಿ 2006)**

2005-06ನೇ ಸಾಲಿಗೆ ಹೊಸ ಘಟಕ ಕಾರ್ಯಕ್ರಮದಡಿ ಬಿಜಾಪುರ, ಹಾಗೂ ಮೈಸೂರಿನಲ್ಲಿ ನೂತನವಾಗಿ ಸ್ಥಾಪಿತವಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣದ ಕಾಮಗಾರಿ ಹಾಗೂ ಗುಲ್ಬರ್ಗಾ ದಲ್ಲಿರುವ ನಾಲ್ಕು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ವಿಜ್ಞಾನ ವಿಭಾಗ ಕಟ್ಟಡ ಕಾಮಗಾರಿಯನ್ನು ನಿರ್ವಹಿಸಲು ಕರ್ನಾಟಕ ಗೃಹ ಮಂಡಳಿಗೆ ವಹಿಸಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅಧಿಕಾರ ನೀಡಿದ್ದ ದಿನಾಂಕ: 24.10.2005ರ ಆದೇಶವನ್ನು ಹಿಂದೆ ಪಡೆದು, Deposit Contribution ಮುಖಾಂತರ ಲೋಕೋಪಯೋಗಿ ಇಲಾಖೆಗೆ ಕಾಮಗಾರಿಯನ್ನು ವಹಿಸಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಕಾಮಗಾರಿಗಳ ಗುಣಮಟ್ಟದ ಬಗ್ಗೆ ಪರಿಶೀಲಿಸಿ ಆರ್ಥಿಕ ಮತ್ತು ಭೌತಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ನೀಡತಕ್ಕದ್ದು.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹಗಾರರ ಟಿಪ್ಪಣಿ ಸಂಖ್ಯೆ: ಶಿ.ಇ:45:ಐ.ಎಫ್(ಬಿಎ)2006: ದಿನಾಂಕ: 17.1.2006ರಲ್ಲಿ ನೀಡಿದ ಸಹಮತಿಯನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ:1:ಟಿ.ಎಫ್.ಸಿ 96: ದಿನಾಂಕ: 10.07.1996ರಲ್ಲಿ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಯವರಿಗೆ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 211 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಸಹಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ).

## ಶಿಕ್ಷಣ ಸಚಿವಾಲಯ

**ವಿಷಯ:** ಗುಜರಾತ್ ಮಾದರಿ ಶಾಲಾ ಮಕ್ಕಳ ಆರೋಗ್ಯ ತಪಾಸಣಾ ಕಾರ್ಡ್ ಅಧ್ಯಯನಕ್ಕಾಗಿ ಅಹಮದಾಬಾದ್‌ಗೆ ತೆರಳಲು ಸಹ ನಿರ್ದೇಶಕರು, ಹಾಗೂ ಹಿರಿಯ ಸಹಾಯಕ ನಿರ್ದೇಶಕರು, ಮಧ್ಯಾಹ್ನ ಉಪಹಾರ ಯೋಜನೆ, ಅವರುಗಳಿಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಸಿ1(4)ನೀಫಾ.ತ.ಕಾ-01/2004-05 ದಿನಾಂಕ: 12.01.2006.

**ಪ್ರಸ್ತಾವನೆ:**

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳುರು ಅವರು ಮೇಲೆ ಓದಲಾದ ದಿನಾಂಕ: 12.01.2006ರ ಪತ್ರದಲ್ಲಿ ಮಾನ್ಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ಜನವರಿ 7 ರಂದು ಹಾಗೂ ದಿನಾಂಕ: 9.1.2006ರಂದು ಓ.ಆರ್.ಎಂ. ಸಭೆಯಲ್ಲಿ ಗುಜರಾತ್ ರಾಜ್ಯದಲ್ಲಿ ಜಾರಿಯಲ್ಲಿರುವ ಶಾಲಾ ಮಕ್ಕಳಿಗೆ ಆರೋಗ್ಯ ತಪಾಸಣಾ ಕಾರ್ಡುಗಳನ್ನು ನೀಡುವ ವ್ಯವಸ್ಥೆಯನ್ನು ಅಧ್ಯಯನ ಮಾಡಲು ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ನಿಯೋಜಿಸಬೇಕೆಂದು ತೀರ್ಮಾನಿಸಿರುವ ಕಾರಣ ಶ್ರೀಮತಿ ಎಸ್.ಎನ್. ಪ್ರತಿಮಾ, ಸಹ ನಿರ್ದೇಶಕರು ಹಾಗೂ ಶ್ರೀ ವಿ.ಸಿ. ಬಸವರಾಜೇಗೌಡ, ಹಿರಿಯ ಸಹಾಯಕ ನಿರ್ದೇಶಕರು, (ಮ.ಉ.ಯೋ), ಸಾರ್ವಜನಿಕ ಶಿಕ್ಷಣ ಇಲಾಖೆ ಅವರುಗಳನ್ನು 16 ರಿಂದ 18ನೇ ಜನವರಿ 2005ರ ವರೆಗೆ ಅಧ್ಯಯನ ನಡೆಸುವ ಸಲುವಾಗಿ ಅಹಮದಾಬಾದ್‌ಗೆ ಪ್ರವಾಸ ಹೋಗಲು ಅನುಮತಿ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 05 ಎಂಎಂಎಸ್ 2006, ಬೆಂಗಳೂರು, ದಿನಾಂಕ: 30ನೇ ಜನವರಿ 2006**

**(ಇಡಿ 05 ಸ್ಕೀಮರ (ಯೂನಿಕ್) 2005, ಬೆಂಗಳೂರು, ದಿನಾಂಕ: 30ನೇ ಜನವರಿ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಅಧ್ಯಯನ ನಡೆಸುವ ಸಲುವಾಗಿ 16 ರಿಂದ 18ನೇ ಜನವರಿ, 2006ರ ವರೆಗೆ ಗುಜರಾತ್ ರಾಜ್ಯದ ಅಹಮದಾಬಾದ್‌ಗೆ ಪ್ರಯಾಣ ಮಾಡಲು ಶ್ರೀಮತಿ ಎಸ್.ಎನ್. ಪ್ರತಿಮಾ, ಸಹ ನಿರ್ದೇಶಕರು ಹಾಗೂ ಶ್ರೀ ವಿ.ಸಿ. ಬಸವರಾಜೇಗೌಡ, ಹಿರಿಯ ಸಹಾಯಕ ನಿರ್ದೇಶಕರು, (ಮ.ಉ.ಯೋ). ಸಾರ್ವಜನಿಕ ಶಿಕ್ಷಣ ಇಲಾಖೆ ಅವರುಗಳಿಗೆ ಈ ಮೂಲಕ ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 212 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಸಹಕಾರ್ಯದರ್ಶಿ,

(ಯೋಜನೆ) ಶಿಕ್ಷಣ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಸಿಂಧಗಿಯ ಶ್ರೀ ಪದ್ಮರಾಜ ವಿದ್ಯಾವರ್ಧಕ ಸಂಘದ ಶ್ರೀ ಪದ್ಮರಾಜ ಕಾಲೇಜ್ ಆಫ್ ಎಜುಕೇಷನ್‌ಗೆ ಸಂಯೋಜನೆ.

**ಉಲ್ಲೇಖ:**
1) ದಿನಾಂಕ: 19.02.2004ರ ಸಂ. ಇಡಿ 228 ಯುಆರ್‌ಸಿ 2004ರ ಸರ್ಕಾರಿ ಆದೇಶ.
2) ದಿನಾಂಕ: 21.12.2005 ಸಂ. F.SRO / NCTE / B.Ed / 2005-06 / 4823 ರ NCTE ಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿ: 05.01.2006ರ ಪ್ರಾಂಶುಪಾಲರು, ಶ್ರೀ ಪದ್ಮರಾಜ ಕಾಲೇಜ್ ಆಫ್ ಎಜುಕೇಷನ್, ಸಿಂಧಗಿ, ಇವರ ಪತ್ರ.

**ಪೀಠಿಕೆ :**

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ / ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬಿಜಾಪುರ ಜಿಲ್ಲೆ ಸಿಂಧಗಿಯ ಶ್ರೀ ಪದ್ಮರಾಜ್ ವಿದ್ಯಾವರ್ಧಕ ಸಂಘದ ಶ್ರೀ ಪದ್ಮರಾಜ ಕಾಲೇಜ್ ಆಫ್ ಎಜುಕೇಷನ್ ಅನ್ನು ಸಿಂಧಗಿಯಲ್ಲಿ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ

ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ದಿನಾಂಕ: 05.01.2006ರ ಪತ್ರದಲ್ಲಿ ಸದರಿ ಕಾಲೇಜಿನ ಪ್ರಾಂಶುಪಾಲರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 05 ಯುಕೆವಿ 2006, ಬೆಂಗಳೂರು, ದಿನಾಂಕ: 25ನೇ ಜನವರಿ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಿಜಾಪುರ ಜಿಲ್ಲೆ ಸಿಂಧಗಿಯ ಶ್ರೀ ಪದ್ಮರಾಜ ವಿದ್ಯಾವರ್ಧಕ ಸಂಘದ ಶ್ರೀ ಪದ್ಮರಾಜ ಕಾಲೇಜ್ ಆಫ್ ಎಜುಕೇಷನ್, ಸಿಂಧಗಿಯ ಬಿ.ಎಡ್. ಕೋರ್ಸಿಗೆ 2005-06 ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್. 213

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ:** ಶ್ರೀಮತಿ ಡಿ. ನಿರ್ಮಲ, ಉಪನಿರ್ದೇಶಕರು, (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಹಾಗೂ ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧೀಕ್ಷಕರು, (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಉತ್ತರ ಕನ್ನಡ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಹಾರ ಮತ್ತು ನಾಗರೀಕ ಸರಬರಾಜು ಆಯುಕ್ತರ ಪತ್ರಸಂಖ್ಯೆ: ಸಿಎಫ್ಎಸ್:ಇಎಸ್‌ಟಿ (2)34 / 2003-04, ದಿನಾಂಕ: 27.12.2004.

**ಪ್ರಸ್ತಾವನೆ:**

ಆಹಾರ ಮತ್ತು ನಾಗರೀಕ ಸರಬರಾಜು ಆಯುಕ್ತರು ಮೇಲೆ ಓದಲಾದ ಅವರ ಪತ್ರದಲ್ಲಿ ಶ್ರೀಮತಿ ಡಿ. ನಿರ್ಮಲ, ಉಪನಿರ್ದೇಶಕರು, (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕಾರವಾರ ಇವರು ದಿನಾಂಕ: 4.5.2000 ರಿಂದ 30.9.2004 ರವರೆಗೆ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ಶ್ರೀ ಕೃಷ್ಣಾ ಎಸ್. ನಾಯ್ಕ, ದ್ವಿತೀಯ ದರ್ಜೆ ಸಹಾಯಕರು ಇವರನ್ನು ಅನಧಿಕೃತವಾಗಿ ಕಾರ್ಯನಿರ್ವಹಿಸಲು ಅವಕಾಶ ನೀಡಿದ್ದು, ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧಿಕ್ಷಕರು ಹಾಗೂ ಶ್ರೀ ಕೃಷ್ಣಾ ಎಸ್. ನಾಯ್ಕ ಇವರುಗಳೊಂದಿಗೆ ಷಾಮೀಲಾಗಿ ನ್ಯಾಯಬೆಲೆ ಅಂಗಡಿಗಳಿಂದ ಪೊಲೀಸರಿಗೆ ಉಚಿತವಾಗಿ ಆಹಾರ ಧಾನ್ಯ ವಿತರಿಸುವ ಬಿಲ್ಲುಗಳನ್ನು ಮತ್ತು ಮಧ್ಯಾಹ್ನ ಉಪಹಾರ ಯೋಜನೆಯ ಬಿಲ್ಲುಗಳನ್ನು ಪರಿಶೀಲಿಸಲು ಮತ್ತು ಬಿಲ್ಲುಗಳ ಪಾವತಿ ಕಾರ್ಯ ನಿರ್ವಹಿಸುವ ಕಾರ್ಯವನ್ನು ವಹಿಸಿಕೊಟ್ಟು ಅವರ ಸಹಿಯಲ್ಲಿಯೇ ರೂ. 17,68,750/- ಹಣ ದುರುಪಯೋಗಕ್ಕೆ ಕಾರಣರಾಗಿದ್ದು, ಕರ್ನಾಟಕ ಫೈನಾನ್ಸಿಯಲ್ ಕೋಡ್ ಆರ್ಟಿಕಲ್ 3 ಮತ್ತು 67ರ ಪ್ರಕಾರ ಚೆಕ್ ಪುಸ್ತಕವನ್ನು ಅವರ ತಾಬಾದಲ್ಲಿಯೇ ಇಟ್ಟುಕೊಳ್ಳಬೇಕೆಂಬ ನಿಯಮ ಮೀರಿ ಈ ಇಬ್ಬರು ನೌಕರರೊಂದಿಗೆ ಷಾಮೀಲಾಗಿ ಅವರಿಗೆ ವಹಿಸಿಕೊಟ್ಟು ಇಷ್ಟೊಂದು ಪ್ರಮಾಣದ ಸರ್ಕಾರಿ ಹಣ ದುರುಪಯೋಗಕ್ಕೆ ಕಾರಣರಾಗಿರುತ್ತಾರೆ ಎಂದು ತಿಳಿಸಿರುತ್ತಾರೆ.

ಮುಂದುವರಿದು ಅದೇ ರೀತಿ ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧೀಕ್ಷಕರು, (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಕಾರವಾರ ಇವರು ನವೆಂಬರ್ 1995 ರಿಂದ 29.9.2003 ರವರೆಗಿನ ಅವಧಿಯಲ್ಲಿ ಕರ್ತವ್ಯ ನಿರ್ವಹಿಸಿ ಈ ಪ್ರಕರಣದಲ್ಲಿ ಭಾಗಿಯಾಗಿರುವ ಇನ್ನಿಬ್ಬರೊಡನೆ ಷಾಮೀಲಾತಿ ಇವರಿಗೆ ನಿರ್ವಹಿಸಲಾದ ಸರ್ಕಾರಿ ಕೆಲಸವನ್ನು ನಿರ್ವಹಿಸದೆ ಬಿಲ್ಲುಗಳನ್ನು ಪರಿಶೀಲಿಸದೇ ಹಾಗೂ ನಿಯಮಾನುಸಾರ ಚೆಕ್ ಪುಸ್ತಕಗಳನ್ನು ಉಪನಿರ್ದೇಶಕರ ಬಳಿಯಲ್ಲಿ ಇಟ್ಟುಕೊಳ್ಳಬೇಕೆಂಬ ನಿಯಮವಿದ್ದರೂ ಇವುಗಳನ್ನು ಶ್ರೀ ಕೃಷ್ಣಾ ಎಸ್. ನಾಯಕ್‌ರವರಿಗೆ ವಹಿಸಿ ಕೊಟ್ಟಿರುವುದಕ್ಕೆ ಆಕ್ಷೇಪಿಸದೇ 17 ಚೆಕ್ಕುಗಳ ಮುಖಾಂತರ ಇಷ್ಟೊಂದು ಹಣವನ್ನು ತೆಗೆದು ದುರುಪಯೋಗಪಡಿಸಿಕೊಳ್ಳಲು ಕಾರಣವಾಗಿರುವ ಬಗ್ಗೆ ಆಹಾರ ಮತ್ತು ನಾಗರೀಕ ಸರಬರಾಜು ಆಯುಕ್ತರು ತಿಳಿಸಿರುತ್ತಾರೆ. ಇದರಲ್ಲಿ ಷಾಮೀಲಾದವರ ಎಲ್ಲರ ಮೇಲೂ ಶಿಸ್ತು ಕ್ರಮ ಜರುಗಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಸರ್ಕಾರವು ಆಹಾರ ಮತ್ತು ನಾಗರೀಕ ಸರಬರಾಜು ಆಯುಕ್ತರ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 91 ಆಇಸೇ 2004, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2006**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 214ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಡಿ. ನಿರ್ಮಲ, ಉಪನಿರ್ದೇಶಕರು, (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಹಾಗೂ ಶ್ರೀ ಎಸ್.ಎಸ್. ಕೊಳಂಬಕರ್, ಲೆಕ್ಕಾಧೀಕ್ಷಕರು (ನಿವೃತ್ತ), ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ವಿವರಿಸಲಾದ ಆರೋಪಗಳ ಮೇಲೆ ಶಿಸ್ತು ಕ್ರಮ ಜರುಗಿಸಲು ಅನುವಾಗುವಂತೆ ಇಲಾಖಾ ವಿಚಾರಣೆ ಪ್ರಕ್ರಿಯೆಯನ್ನು ನಡೆಸಲು ಆದೇಶಿಸಲಾಗಿದೆ.

ಈ ಆಪಾದಿತರ ಮೇಲೆ ಶಿಸ್ತು ಕ್ರಮವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರಲ್ಲಿ ನಿರ್ಧಿಷ್ಟಪಡಿಸಿರುವ ಕಾರ್ಯವಿಧಾನವನ್ನು ಈ ಶಿಸ್ತು ಕ್ರಮದಲ್ಲಿ ಅನುಸರಿಸಲು ಆದೇಶಿಸಿದೆ.

ಶ್ರೀ ಎಸ್.ಎಸ್. ಕೊಳಂಬಕರ್ ಇವರು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇಲೆ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸಿರುವ ಪ್ರಯುಕ್ತ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 6 ರಾಲೆಪ 2006, ದಿನಾಂಕ: 19.1.2006 ರಲ್ಲಿ ಸಹಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 214

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಆಕುಕ 140 ಎಂಎಂಸಿ 2005, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ 2006.**

ದಿನಾಂಕ 27.12.2005 ಸಂಖ್ಯೆ: ಆಕುಕ 140 ಎಂಎಂಸಿ 2005ರ ಸರ್ಕಾರಿ ಆದೇಶದ ಪ್ರಸ್ತಾವನೆಯ ಕಂಡಿಕೆ (4)ರ 9ನೇ ಸಾಲಿನ ಆವರಣಗಳಲ್ಲಿ "(ಎರಡು ಸಾವಿರದ ಹದಿಮೂರು ರೂಪಾಯಿಗಳು ಮಾತ್ರ)" ಎಂದು ನಮೂದಾಗಿರುವುದನ್ನು "(ಎರಡು ಸಾವಿರದ ಐದುನೂರ ಹದಿಮೂರು ರೂಪಾಯಿಗಳು ಮಾತ್ರ)" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 215

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಬಗ್ಗೆ.

**ಓದಲಾಗಿದೆ:**
1) ದಿನಾಂಕ 1.10.2005ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ನಡವಳಿಗಳು.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಅಧ್ಯಕ್ಷತೆಯಲ್ಲಿ ದಿನಾಂಕ 9.1.2006 ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ತಾಂತ್ರಿಕ ಸೇವೆಗಳು, ಯು.ಪಿ.ಎಸ್.ಗಳು, ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ಹಾಗೂ ತರಬೇತಿ ನೀಡುವುದಕ್ಕೆ ನಾನಾ ಸಂಸ್ಥೆಗಳು ಇ-ಆಡಳಿತ ಇಲಾಖೆಯಲ್ಲಿ ನಮೂದಿತಗೊಳಿಸಲಾದ ಪಟ್ಟಿಯಲ್ಲಿ ತಮ್ಮ ಹೆಸರನ್ನು ಸೇರಿಸುವಂತೆ ಸರ್ಕಾರವನ್ನು ಕೋರಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಈ ಅರ್ಜಿಗಳನ್ನು ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ಸಭೆಯಲ್ಲಿ ಸೂಕ್ಷ್ಮವಾಗಿ ಪರಿಶೀಲಿಸಲ್ಪಟ್ಟು ಸದರಿ ಉಪಸಮಿತಿಯ ಶಿಫಾರಸ್ಸುಗಳ ಮೇರೆಗೆ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 9.1.2006 ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯಿಂದ ಮಾರಾಟಗಾರರ ನಮೂದಿತ ಪಟ್ಟಿಯ ಅನುಮೋದಿಸಲ್ಪಟ್ಟಿರುತ್ತದೆ. ಈ ಬಗ್ಗೆ ಕೆಳಕಾಣಿಸಿದಂತೆ ಸರ್ಕಾರದ ಆದೇಶವನ್ನು ಪ್ರಸ್ತಾಪಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಇಜಿವಿ 2005, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2006**

ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ತಾಂತ್ರಿಕ ಸೇವೆಗಳು, ಯು.ಪಿ.ಎಸ್.ಗಳು, ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ಹಾಗೂ ತರಬೇತಿ ನೀಡುವುದಕ್ಕಾಗಿ ಕೆಳಕಂಡ ಸಂಸ್ಥೆಗಳನ್ನು ಅವರ ಹೆಸರಿನ ಮುಂದೆ ನಮೂದಿಸಿದ ವರ್ಗದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ದಿನಾಂಕ: 31.3.2006ರವರಿಗೆ ನಮೂದಿತ ಮಾರಾಟಗಾರರ ಪಟ್ಟಿಯಲ್ಲಿ ಸೇರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| Sl no. | Name of the vendor | Category | Contact person & Phone Nos. |
|---|---|---|---|
| 1 | ACCEL ICIM Frontline Ltd<br># 18/1, Cunningham Road,<br>Bangalore 560 052<br>e-mail: mjphilip@accelicim.com<br>girist.hanuman@accelicim.com | Software Developer (Minor) | Sri. M.J. Philip<br>Sri. Girish Hanuman<br>Ph: 080 - 22268025<br>FAX : 080 - 22265279 |
| 2 | NIIT Technologies Ltd.<br>Ramakrishna Towers,<br># 31/2, Rupena Agrahara, Begur Hobli, Hosur Road, Bangalore South Taluk,<br>Bangalore 560 068<br>e-mail: ananth.iyer@niit-tech.com | Software Developer (Minor) | Sri. Ananth R Iyer<br>Cell: 98457 54024<br>Ph: 080 - 30289500<br>FAX: 080 - 25501220 |
| 3 | Coastel Infotech Ltd.,<br># 21/1, Aradhya Complex, Vanivilas Road,<br>Basavanagudi, Bangalore 560 004.<br>e-mail: coastalinfotech@vsnl.net<br>coastalinfotech@touchtelindia.net | Software Developer (Minor) | Sri. Guruprasad Pavanje<br>cell: 98440 19401<br>Ph: 080 - 26673887, 26606442<br>FAX: 080 - 26507351 |

| 1 | 2 | 3 | 4 |
|---|---|---|---|
| 4 | Foresee Information Systems,<br>No. 1086, I Block, III Stage,<br>Adarsha Layout, Basaveshwaranagar,<br>Bangalore 560 079<br>e-mail: sales@foreseeinfo. com<br>rkreddy@foreseeinfo.com | Software Develper (Minor) | Sri K. Ramakrishna Reddy<br>Cell: 98864 85775<br>Ph: 080 - 23230391<br>FAX: 080 - 23230391 |
| 5 | OM Softwares,<br>No. 1771, Belgaum Bhavan,<br>Kelkar Bagh, Belgaum - 590 002<br>e-mail: Om_sk@rediffmail.com | Date Entry (Belgaum district only) | Sri Anilkumar Korishetty<br>Cell: 94481 31351<br>Ph: 0831 - 2452351, 2436730<br>FAX: 0831 - 2436730 |
| 6 | Amita Infotech,<br># 2/14, Poojari Layout,<br>80 Feet Road, RMV 2nd Stage, 2nd Block,<br>Bangalore 560 094.<br>e-mail: bhasgowda@aol.com | Maintenance | Sri. Bhaskar H<br>Cell: 98442 03364<br>Ph: 080 - 23513999, 30610221<br>FAX: 080 - 23513999 |
| 7 | Comcepts<br># 2725, III Main,<br>VV Mohalla,<br>Mysore 570 002<br>e-Mail: comcepts@eth.net | Maintenance (For Mysore, Mandya & Hassan districts only) | Sri. Sharath Chandra B.T.<br>Cell: 98454 42882<br>Ph: 0821 - 2410813, 5552223<br>FAX: 0821 - 2518048 |
| 8 | Dubas Enginering Pvt. Ltd,<br>347/1A, Bilekahalli, 6th Cross, 2nd Stage,<br>B.T.M. Layout, Off Banneraghatta Road,<br>Bangalore 560 076.<br>e-mail: dubas@vsnl.com | UPS & VS | Sri S.K. Shah,<br>Cell: 98456 90285<br>Ph: 080 - 26683463 / 64<br>FAX: 080 - 26684020 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್. ವಲ್ಲೂರ**
ಪಿ.ಆರ್. 217
ಪೀಠಾಧಿಕಾರಿ, ಇ-ಆಡಳಿತ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು).

## ಶಿಕ್ಷಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಇಡಿ 292 ಡಿಜಿಡಿ 2005, ಬೆಂಗಳೂರು, ದಿನಾಂಕ: 31ನೇ ಜನವರಿ 2006**

ಸರ್ಕಾರಿ ಆದೇಶ ಸಂಖ್ಯೆ: ಇಡಿ 190 ಡಿಜಿಡಿ 2003, ದಿನಾಂಕ: 10.10.2005 ರಲ್ಲಿ ಶ್ರೀ ಎ. ಶಂಕರಪ್ಪ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಯರಮರಸ್, ರಾಯಚೂರು ಇವರ ಪದನಾಮ "ಹಿರಿಯ ಉಪನ್ಯಾಸಕರು" ಎಂಬುದರ ಬದಲಾಗಿ "ಉಪನ್ಯಾಸಕರು" ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 218
**ಸ್ವರ್ಣಲತ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಉಡುಪಿ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಅಧ್ಯಾಯಗಳನ್ನು ಹೊರಗಿನ ವಿದ್ವಾಂಸರಿಂದ ರಚಿಸುವ ಯೋಜನೆಗಾಗಿ ಸಂಭಾವನೆ ನೀಡಲು ಮಂಜೂರಾತಿ ಕೋರಿ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 13 ಕರಾಗೆ 2005 ದಿನಾಂಕ: 9.9.2005.
2) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕ.ಗ್ಯಾ.ಸಿ.ಸಿ. (2) ಉ.ಜಿ.ಗ್ಯಾ.2005-06 / 478, ದಿನಾಂಕ: 15.10.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್‌ನ (ಪರಿಷ್ಕೃತ) ಮೂರು ಅಧ್ಯಾಯಗಳನ್ನು ಆಯಾ ಕ್ಷೇತ್ರದಲ್ಲಿ ಪರಿಣತಿ ಹೊಂದಿದ ವಿದ್ವಾಂಸರಿಗೆ ವಹಿಸಲು ಹಾಗೂ ಅಂತಹ ಪ್ರತಿ ವಿದ್ವಾಂಸರಿಗೆ ತಲಾ ರೂ. 20,000/- ಸಂಭಾವನೆ ಹಣಪಾವತಿ

ಮಾಡಲು ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರಿಗೆ ಮಂಜೂರು ಮಾಡಲಾಗಿತ್ತು. ಮೇಲೆ (2) ರಲ್ಲಿ ಓದಲಾದ ದಿನಾಂಕ: 15.10.2005ರ ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರು ಇದೇ ವಿಷಯಗಳ ಮೂರು ಅಧ್ಯಾಯನಗಳನ್ನು ಉಡುಪಿ ಜಿಲ್ಲಾ ಗ್ಯಾಸೆಟಿಯರ್ ಪ್ರಕಟಣೆಗೆ ಸಂಬಂಧಿಸಿದಂತೆ, ಹೊರಗಿನ ವಿದ್ವಾಂಸರಿಗೆ ಅಧ್ಯಾಯ ರಚನೆ ಮಾಡಿಕೊಡುವಂತೆ ಇವರುಗಳಿಗೆ ಅಧ್ಯಾಯ ಒಂದಕ್ಕೆ ತಲಾ ರೂ. 20,000/- (ಮೂರು ಅಧ್ಯಾಯಗಳಿಗೆ ಒಟ್ಟು 60,000/-) ಸಂಭಾವನೆ ನೀಡಬಹುದಾಗಿದೆಯೆಂದು ವರದಿ ಮಾಡಿದ್ದಾರೆ. ಹಾಗೂ 2005-06ನೇ ಸಾಲಿನ ಯೋಜನೆ ಅನುದಾನದಲ್ಲಿ ಗ್ಯಾಸೆಟಿಯರ್‌ಗೆ ಸಂಬಂಧಪಟ್ಟಂತೆ ರೂ. 10,00,000/- ಲಕ್ಷ ಅನುದಾನ ನಿಗಧಿಪಡಿಸಿರುವುದರಿಂದ, ಈ ವೆಚ್ಚವನ್ನು ಪ್ರಸಕ್ತ ಸಾಲಿನಲ್ಲಿಯೇ ಭರಿಸಲು 11 ಮಂದಿ ಸಂಪಾದಕರುಗಳ ಪೈಕಿ 8 ಜನರು ಮಾತ್ರ ಕೆಲಸ ಮಾಡುತ್ತಿದ್ದು, ಎಂಟು ಸಂಪಾದಕರು ಹಾಗೂ ಇಬ್ಬರು ಅನ್ವೇಷಕರು 2005-6ನೇ ಸಾಲಿನಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಅಧ್ಯಾಯ ರಚನೆ, ಬಿಜಾಪುರ ಜಿಲ್ಲಾ ಭಾಷಾಂತರ ಮಾಡಿದ ಅಧ್ಯಾಯಗಳ ಪರಿಶೀಲನೆ ಕೆಲಸ ಮತ್ತು ತಾಲ್ಲೂಕು ಗ್ಯಾಸೆಟಿಯರಗಳ ಪ್ರಕಟಣೆಗೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಿಸುತ್ತಿರುವುದರಿಂದ ಅಧ್ಯಾಯ ರಚನೆಯ ಗುಣಮಟ್ಟದ ದೃಷ್ಟಿಯಿಂದ ಉಡುಪಿ ಜಿಲ್ಲಾ ಗ್ಯಾಸೆಟಿಯರ್‌ನ ಮೂರು ಅಧ್ಯಾಯಗಳನ್ನು - ಅಧ್ಯಾಯ - 10 ನ್ಯಾಯಾಡಳಿತ ಅಧ್ಯಾಯ - 15 ವೈದ್ಯಕೀಯ ಮತ್ತು ಆರೋಗ್ಯ ಸೇವೆಗಳು ಅಧ್ಯಾಯ - 16 ಇತರೆ ಸಮಾಜ ಸೇವಾ ಸೌಲಭ್ಯಗಳು ಇವುಗಳನ್ನು ಹೊರಗಿನ ವಿದ್ವಾಂಸರಿಗೆ ಸಂಭಾವನೆ ನೀಡಲು ಒಟ್ಟು ರೂ. 60,000/- ಕ್ಕೆ ಮಂಜೂರಾತಿ ಆದೇಶ ನೀಡಲು ಕೋರಿರುತ್ತಾರೆ.

ಮುಖ್ಯ ಸಂಪಾದಕರು, ಕನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 27 ಕರಾಗೆ 2005, ಬೆಂಗಳೂರು, ದಿನಾಂಕ: 30ನೇ ಜನವರಿ 2006**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಅಧ್ಯಾಯಗಳನ್ನು ಹೊರಗಿನ ವಿದ್ವಾಂಸರಿಂದ ರಚಿಸುವ ಯೋಜನೆಗಾಗಿ ಸಂಭಾವನೆ ನೀಡಲು ಒಟ್ಟು ರೂ. 60,000/- (ಅರವತ್ತು ಸಾವಿರ ಮಾತ್ರ) ಸಂಭಾವನೆ ಹಣ ಪಾವತಿ ಮಾಡಲು ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರಿಗೆ ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು 2005-06ನೇ ಸಾಲಿನ ಲೆಕ್ಕ ಶೀರ್ಷಿಕೆ 3454-02-110-0-01 (ಯೋಜನೆ) ಉಪಶೀರ್ಷಿಕೆ 059 ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಇಡಿ 1023 ಐ.ಎಸ್. (ಬಿ.ಎ) 2005 ದಿನಾಂಕ: 12.10.2006 ರಲ್ಲಿ ನೀಡಿದ ಸಹಮತಿ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. 1 ಟಿ.ಎಫ್.ಪಿ. 96 ದಿನಾಂಕ: 10.7.96 ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 219

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಜಂಟಿ ನಿದೇಶಕರಾದ ಶ್ರೀ ವೆಂ. ಶ್ರೀನಿವಾಸ ಇವರ 2003-2004 ರ ಸಾಲಿನ ಕಾರ್ಯನಿರ್ವಹಣಾ ವರದಿ ಬಗ್ಗೆ

**ಓದಲಾಗಿದೆ:** ಶ್ರೀ ವೈ.ಕೆ. ಮುದ್ದುಕೃಷ್ಣ ಮಾಜಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ರವರ ಪತ್ರ ದಿನಾಂಕ: 12.04.2005.

**ಪ್ರಸ್ತಾವನೆ:**

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಜಂಟಿ ನಿರ್ದೇಶಕರಾದ ಶ್ರೀ ವೆಂ. ಶ್ರೀನಿವಾಸ ರವರ 2003-2004 ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ಕಾಲಂ 9 ರಲ್ಲಿ ವರದಿ ಮಾಡುವ ಪ್ರಾಧಿಕಾರ ಮಾಜಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಶ್ರೀ ವೈ.ಕೆ. ಮುದ್ದುಕೃಷ್ಣ ರವರು ಈ ಕೆಳಗಿನಂತೆ ತಮ್ಮ ಷರಾವನ್ನು ನಮೂದಿಸಿದ್ದು, ಅವುಗಳನ್ನು ಸಲಹಾತ್ಮಕ ಷರಾಗಳೆಂದು ಪರಿಗಣಿಗಿಸಬೇಕೆಂದು ತಮ್ಮ ದಿನಾಂಕ: 12.04.2005 ರ ಉಲ್ಲೇಖಿತ ಪತ್ರದಲ್ಲಿ ತಿಳಿಸಿರುತ್ತಾರೆ. ಅದರಂತೆ ಅವುಗಳನ್ನು ಸಲಹಾತ್ಮಕ ಷರಾಗಳೆಂದು ಪರಿಗಣಿಸಲು ಅಂಗೀಕರಿಸುವ ಪ್ರಾಧಿಕಾರ ಮಾಜಿ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುತ್ತಾರೆ.

**ಷರಾ :** "ಶ್ರೀಯುತರು ಇಲಾಖೆಯಲ್ಲಿ ಹಿರಿಯ ಅಧಿಕಾರಿಯಾಗಿದ್ದು, ಸಿಬ್ಬಂದಿ ಸಹದ್ಯೋಗಿಗಳೊಂದಿಗೆ ಮಧುರಭಾವದಿಂದಿರದೆ ದೂರ ಸರಿಯುವ ಪ್ರವೃತ್ತಿಯನ್ನು ಹೊಂದಿರುತ್ತಾರೆ. ಹುದ್ದೆಗೆ ತಕ್ಕಂತೆ ಗೌರವ ಸೂಚಿಸುವುದಾಗಲಿ ಇಲಾಖಾ ಗೌಪ್ಯ ಕಾಪಾಡುವ ಬಗ್ಗೆ ಆಗಲಿ ಕಾಳಜಿ ಇಲ್ಲ. ಇದನ್ನು ಪ್ರತಿಕೂಲ ಷರಾವೆಂದು ತಿಳಿಯುವುದು."

ಆದರಂತೆ ಈ ಕೆಳಗಿನ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 40 ಕಸನಿ 2004, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ 2006**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ವೆಂ. ಶ್ರೀನಿವಾಸ ರವರ 2003-04 ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ಒಳಗೊಂಡಿರುವ ಷರಾಗಳನ್ನು ಸಲಹಾತ್ಮಕ ಷರಾಗಳೆಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 220

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಅಸ್ತಿತ್ವದಲ್ಲಿರುವ ಇಂಜಿನಿಯರಿಂಗ್ / ಮ್ಯಾನೇಜ್‌ಮೆಂಟ್ ಕಾಲೇಜುಗಳ ನೂತನ ಕೋರ್ಸುಗಳ ಪ್ರಾರಂಭಕ್ಕೆ ಹಾಗೂ ವಿದ್ಯಾರ್ಥಿ ಪ್ರಮಾಣದ ಹೆಚ್ಚಳದ ಪರಿಶೀಲನೆಗಾಗಿ ತಜ್ಞರ ಸಮಿತಿಯ ರಚನೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಇಡಿ 138 ಟಿಇಸಿ 2002 ದಿನಾಂಕ: 13.12.2002.
2) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಇಡಿ 227 ಟಿಇಪಿ 2004, ದಿನಾಂಕ: 30.10.2004.
3) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಟಿಇ 65 ಡಿವಿಪಿ (1) 05 ದಿನಾಂಕ: 02.02.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಹೊಸ ಇಂಜಿನಿಯರಿಂಗ್ : ಎಂ.ಬಿ.ಎ. : ಎಂ.ಸಿ.ಎ. ಕಾಲೇಜುಗಳ ಸ್ಥಾಪನೆ ಹಾಲಿ ಇರುವ ಕಾಲೇಜುಗಳಲ್ಲಿ ಇಂಟೇಕ್ ಬದಲಾವಣೆ ಇವುಗಳ ಬಗ್ಗೆ ಬಂದ ಅರ್ಜಿಗಳ ಬಗ್ಗೆ ತಪಾಸಣೆ ನಡೆಸಿ ಸರ್ಕಾರಕ್ಕೆ ಖಚಿತ ಶಿಫಾರಸ್ಸಿನೊಂದಿಗೆ ವರದಿ ಸಲ್ಲಿಸಲು ಸಮಿತಿಯನ್ನು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ತಿದ್ದುಪಡಿ ಆದೇಶದಲ್ಲಿ ಸಮಿತಿಯ ಸದಸ್ಯರುಗಳಲ್ಲಿ ಒಬ್ಬರಾದ ಡಾ: ಹೆಚ್.ಎನ್. ಶಿವಶಂಕರ್, ಪ್ರಿನ್ಸಿಪಾಲರು, ಯು.ವಿ.ಸಿ.ಇ. ಬೆಂಗಳೂರು ಇವರ ಬದಲಾಗಿ ಡಾ: ಮುರುಗೇಶ್ ಮೊದಲಿಯಾರ್, ಪ್ರಿನ್ಸಿಪಾಲರು, ಬಿ.ಎಂ.ಎಸ್. ಇಂಜಿನಿಯರಿಂಗ್ ಕಾಲೇಜು, ಬೆಂಗಳೂರು ರವರನ್ನು ನೇಮಕ ಮಾಡಲಾಗಿತ್ತು. ಆದರೆ ಡಾ: ಮುರುಗೇಶ್ ಮೊದಲಿಯಾರ್ ರವರು ಸಹ ನಿವೃತ್ತಿ ಹೊಂದಿರುತ್ತಾರೆ. ಆದುದರಿಂದ ಈಗ ಪರಿವೀಕ್ಷಣಾ ತಂಡಕ್ಕೆ ಇಬ್ಬರು ಸದಸ್ಯರುಗಳನ್ನು ನೇಮಕ ಮಾಡಿ ಹೊಸದಾಗಿ ಆದೇಶ ಹೊರಡಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ರವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ನಿರ್ದೇಶಕರು, ತಾಂತ್ರಿಕ ಶಿಕ್ಷಣ ರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಹಾಲಿ ಇರುವ ಸಮಿತಿಯನ್ನು ಪುನರ್ ರಚಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 15 ಟಿಇಸಿ 2006, ಬೆಂಗಳೂರು, ದಿನಾಂಕ: 04ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ನಿರ್ಧರಿಸಿರುವಂತೆ ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ಖಾಸಗಿ ಇಂಜಿನಯರಿಂಗ್ ಕಾಲೇಜುಗಳಿಗೆ ಹೊಸ ಕೋರ್ಸುಗಳ ಪ್ರಾರಂಭಕ್ಕೆ ಹಾಗೂ ವಿದ್ಯಾರ್ಥಿ ಪ್ರಮಾಣದ ಹೆಚ್ಚಳಕ್ಕೆ ಬಂದ ಅರ್ಜಿಗಳ ಬಗ್ಗೆ ಪ್ರತಿಯೊಂದು ಕಾಲೇಜನ್ನು ಪರಿವೀಕ್ಷಿಸಿ ನಿರ್ದಿಷ್ಟ ಶಿಫಾರಸ್ಸನ್ನು ಒಳಗೊಂಡ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಈ ಕೆಳಕಂಡ ತಜ್ಞರ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 01 | ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು. | ಅಧ್ಯಕ್ಷರು |
| 02 | ಪ್ರೊ: ಶ್ರೀಧರನ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು | ಸದಸ್ಯರು |
| 03 | ಪ್ರೊ: ಪಟ್ನಾಯಕ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು | ಸದಸ್ಯರು |

ಮೇಲ್ಕಂಡ ತಜ್ಞರ ಸಮಿತಿಗಳು ಸರ್ಕಾರದಿಂದ ಕಾಲಕಾಲಕ್ಕೆ ವಹಿಸಲಾಗುವ ಕಾಲೇಜುಗಳನ್ನು ಮಾತ್ರ ಎ.ಐ.ಸಿ.ಟಿ.ಇ. ನಿಗಧಿಪಡಿಸಿರುವ ಸೂತ್ರ ಮತ್ತು ಮಾರ್ಗ ಸೂಚಿಗಳನ್ನು ಅನುಸರಿಸಿ ಪರಿವೀಕ್ಷಿಸತಕ್ಕದ್ದು.

ಈ ಸಮಿತಿಯು ಈ ಬಗ್ಗೆ ಮುಂದಿನ ಆದೇಶ ಹೊರಡಿಸುವವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 221

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಮಹಿಳೆಯರ ಮೇಲೆ ದೌರ್ಜನ್ಯಕ್ಕೆ ಸಂಬಂಧಿಸಿದ ಪ್ರಕರಣಗಳ ತನಿಖೆ ಮತ್ತು ಅಭಿಯೋಜನೆಗಳ ಬಗ್ಗೆ ಮೇಲುಸ್ತುವಾರಿ ಮಾಡಲು ರಚಿಸಿರುವ ಉನ್ನತಾಧಿಕಾರ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 166 ಎಲ್‌ಎಎಂ 90 ದಿನಾಂಕ: 16.8.1990.
2) ಸರ್ಕಾರಿ ಆದೇಶ ಸಂಖ್ಯೆ: ಲಾ 166 ಎಲ್‌ಎಎಂ 90 ದಿನಾಂಕ: 1.01.1991.
3) ಸರ್ಕಾರಿ ಆದೇಶ ಸಂಖ್ಯೆ: ಲಾ 166 ಎಲ್‌ಎಎಂ 90 ದಿನಾಂಕ: 24.1.1992
4) ಅಧಿಸೂಚನೆ ಸಂಖ್ಯೆ: ಡಿಸಿಎ 7 ಆರ್ ಎಆರ್‌ಬಿ 2004 ದಿನಾಂಕ: 22.9.2004.
5) ಸರ್ಕಾರಿ ಆದೇಶ ಸಂಖ್ಯೆ: ಒಸಇ 56 ಸಶಾಶ 2004 ದಿನಾಂಕ: 18.10.2004.
6) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಸಿಎನ್ : ಎಡಿಎಂ : 05 : 02 : 2002-03 ದಿನಾಂಕ: 27.11.2004

**ಪ್ರಸ್ತಾವನೆ:**

ಮೇಲೆ 1ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಘಟನೆಗಳು ಸಾರ್ವಜನಿಕರಲ್ಲಿ ಉಂಟುಮಾಡುತ್ತಿರುವ ಆಗಾಧ ಆತಂಕ ಮತ್ತು ಮಹಿಳೆಯರ ಮೇಲೆ ದೌರ್ಜನ್ಯ ಹಾಗೂ ವರದಕ್ಷಿಣೆಗೆ ಸಂಬಂಧಿಸಿದ ಪ್ರಕರಣಗಳಲ್ಲಿ ಹೆಚ್ಚಳ ಹಾಗೂ ಇಂತಹ ಘಟನೆಗಳು

ಸಂವೇದನಾಶೀಲತೆ ಮತ್ತು ಉಂಟಾಗಿರುವ ಸಾಮಾಜಿಕ ಸಮಸ್ಯೆಗಳನ್ನು ದೃಷ್ಟಿಯಲ್ಲಿರಿಸಿ, ಈ ಬಗ್ಗೆ ಹೆಚ್ಚು ಗಮನ ಹರಿಸಲು ಮತ್ತು ತ್ವರಿತವಾಗಿ ಸ್ಪಂದಿಸಲು ಇಂತಹ ಪ್ರಕರಣಗಳಿಗೆ ಸಂಬಂಧಿಸಿದ ತನಿಖೆ ಮತ್ತು ಅಭಿಯೋಜನೆಗಳನ್ನು ಮೇಲುಸ್ತುವಾರಿ ಮಾಡಲು ಈ ಕೆಳಕಂಡ ಸದಸ್ಯರನ್ನು ಒಳಗೊಂಡ ಉನ್ನತಾಧಿಕಾರ ಸಮಿತಿ ರಚಿಸಲಾಗಿತ್ತು.

| | | |
|---|---|---|
| 1) | ಸರ್ಕಾರದ ಕಾರ್ಯದರ್ಶಿ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ. | ಅಧ್ಯಕ್ಷರು |
| 2) | ಪೊಲೀಸ್ ಮಹಾ ನಿರ್ದೇಶಕರು, ಸಿ.ಓ.ಡಿ. | ಸದಸ್ಯರು |
| 3) | ಕಾರ್ಯದರ್ಶಿ, ಕಾನೂನು ನೆರವು ಮಂಡಳಿ. | ಸದಸ್ಯರು |
| 4) | ಸರ್ಕಾರದ ವಿಶೇಷ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ವಿಧಾನಸೌಧ, ಬೆಂಗಳೂರು. | ಸದಸ್ಯರು |
| 5) | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬೆಂಗಳೂರು. | ಸದಸ್ಯರು |
| 6) | ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು. | ಸದಸ್ಯರು |
| 7) | ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಮೇಲೆ 4 ರಲ್ಲಿ ಓದಲಾಗಿರುವ ದಿನಾಂಕ: 22.09.2004 ರ ಅಧಿಸೂಚನೆಯಲ್ಲಿ ಅಭಿಯೋಜನಾ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯವನ್ನು ಕಾನೂನು ಇಲಾಖೆಯಿಂದ ಒಳಾಡಳಿತ ಇಲಾಖೆಯ ಆಡಳಿತ ವ್ಯಾಪ್ತಿಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿರುವುದರಿಂದ ಸದರಿ ಸಮಿತಿಯನ್ನು ಪುನರ್ ರಚಿಸುವ ಅಗತ್ಯತೆ ಉದ್ಭವಿಸಿರುತ್ತದೆ.

ಮೇಲೆ 6 ರಲ್ಲಿ ಓದಲಾಗಿರುವ ದಿನಾಂಕ: 27.11.2004ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ಉನ್ನತಾಧಿಕಾರ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 563 ಪಿಪಿಇ 2005, ಬೆಂಗಳೂರು, ದಿನಾಂಕ: 28ನೇ ಜನವರಿ 2006**

ಮೇಲೆ 1 ರಿಂದ 3ರ ವರೆಗೆ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಮಹಿಳೆಯರ ಮೇಲೆ ದೌರ್ಜನ್ಯಕ್ಕೆ ಸಂಬಂಧಿಸಿದ ಪ್ರಕರಣಗಳ ತನಿಖೆ ಮತ್ತು ಅಭಿಯೋಜನೆಗಳ ಬಗ್ಗೆ ಮೇಲುಸ್ತುವಾರಿ ಮಾಡಲು ರಚಿಸಿರುವ ಉನ್ನತಾಧಿಕಾರಿಗಳ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗೃಹ ಇಲಾಖೆ. | ಅಧ್ಯಕ್ಷರು |
| 2) | ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಗೃಹ ಇಲಾಖೆ | ಸದಸ್ಯರು |
| 3) | ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. | ಸದಸ್ಯರು |
| 4) | ಅಪರ ಪೊಲೀಸ್ ಮಹಾ ನಿರ್ದೇಶಕರು (ಅಪರಾಧ) ಬೆಂಗಳೂರು. | ಸದಸ್ಯರು |
| 5) | ಪೊಲೀಸ್ ಮಹಾ ನಿರ್ದೇಶಕರು, ಸಿ.ಓ.ಡಿ., ಬೆಂಗಳೂರು | ಸದಸ್ಯರು |
| 6) | ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು. | ಸದಸ್ಯರು |
| 7) | ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಬೆಂಗಳೂರು, | ಅಹ್ವಾನಿತರು |
| | ಪ್ರತಿ ಸಭೆಗೆ ಯಾವುದೇ ಒಂದು | |
| 8) | ಸ್ವಯಂ ಸೇವಾ ಸಂಸ್ಥೆ, ಒಬ್ಬ ಆಹ್ವಾನಿತರು. | ಅಹ್ವಾನಿತರು |
| 9) | ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯು ಪರಿಣಾಮಕಾರಿ ತನಿಖೆ ಮತ್ತು ಅಭಿಯೋಗಗಳನ್ನು ನಿಶ್ಚಿತಪಡಿಸಲು ಸಂಬಂಧಪಟ್ಟ ಅಧಿಕಾರಿಗಳ ಕುಂದುಗಳು ಮತ್ತು : ಅಥವಾ ಆರೋಪಗಳನ್ನು ಗುರ್ತಿಸುವ ಅಧಿಕಾರವನ್ನು ಹೊಂದಿರುತ್ತದೆ.

ಸಮಿತಿಯು ವಾರ್ತಾ ಪತ್ರಗಳಲ್ಲಿ ಪ್ರಕಟಿಸಿ ಸೂಚಿಸುವ ಸ್ಥಳ ಮತ್ತು ಸಮಯದಲ್ಲಿ 2 ತಿಂಗಳಿಗೊಮ್ಮೆ ಸಭೆ ನಡೆಸಿ 1 ಗಂಟೆಗಿಂತ ಕಡಿಮೆ ಇಲ್ಲದ ಅವಧಿಗೆ ತನಿಖೆ ಅಭಿಯೋಜನೆಯಲ್ಲಿರುವ ಪ್ರಕರಣಗಳನ್ನು ಪರಿಶೀಲಿಸುತ್ತದೆ. ಮತ್ತು ಸಮಿತಿಯು ಸಾರ್ವಜನಿಕರಿಗೆ ತಮ್ಮ ಕುಂದುಕೊರತೆಗಳನ್ನು ಸಲ್ಲಿಸಲು ಸೂಕ್ತ ಕಾಲಾವಕಾಶವನ್ನು ನೀಡುತ್ತದೆ ಮತ್ತು ಕ್ರಿಯಾ ಕಾರ್ಯಕ್ರಮ (ಆ್ಯಕ್ಷನ್ ಪ್ರೋಗ್ರಾಮ್) ತಯಾರಿಸಿ ಸಂಬಂಧಪಟ್ಟ ಅಧಿಕಾರಿಗಳಿಗೆ ಕಳುಹಿಸಿ ಕೊಡುತ್ತದೆ ಮತ್ತು ಅದರ ಪ್ರತಿಯನ್ನು ಮಾನ್ಯ ಮುಖ್ಯ ಮಂತ್ರಿಯವರಿಗೆ ಮತ್ತು ಮಾನ್ಯ ಗೃಹ ಕಾರ್ಯದರ್ಶಿಯವರಿಗೆ ಕಳುಹಿಸಿಕೊಡುತ್ತದೆ.

ಸರ್ಕಾರವು, ಸಾರ್ವಜನಿಕರ ಕುಂದುಕೊರತೆಗಳ ಬಗ್ಗೆ ಅಹವಾಲು ಸಲ್ಲಿಸಲು ಮತ್ತು ಸಾರ್ವಜನಿಕರು ಹಾಗೂ ಅಧಿಕಾರಿಗಳ ನಡುವೆ ತನಿಖೆ ಮತ್ತು ಅಭಿಯೋಗಕ್ಕೆ ಸಂಬಂಧಿಸಿದಂತೆ ಸೂಕ್ತ ಬಾಂಧವ್ಯವನ್ನು ಉಂಟು ಮಾಡುವ ದೃಷ್ಟಿಯಿಂದ ಸದರಿ ಸಮಿತಿಯ ಸದಸ್ಯರೊಡನೆ 3 ತಿಂಗಳಿಗೊಮ್ಮೆ ಸಾರ್ವಜನಿಕರಿಗೆ ಸೂಚನೆ ಮೂಲಕ ತಿಳಿಸುವ ಸ್ಥಳ ಮತ್ತು ಸಮಯದಲ್ಲಿ ಮೇಲ್ಕಂಡ ರೀತಿಯ ಪರಿಶೀಲನಾ ಸಭೆಯನ್ನು ನಡೆಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 222

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಮತ್ತು ಕಾಪಿಪೋಸ ಮತ್ತು ಅಭಿಯೋಗ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಬಿ.ಟಿ. ಬಸವಂತಪ್ಪ, ಸಹಾಯಕ ಪ್ರಾಧ್ಯಾಪಕರು ಇವರ ವಿರುದ್ಧ ಇಲಾಖಾ ವಿಚಾರಣೆ ಪೂರ್ಣಗೊಂಡಿರುವುದರಿಂದ ಅಮಾನತ್ತು ಅವಧಿಯನ್ನು ಸಕ್ರಮಗಳಿಸುವ ಬಗ್ಗೆ.

**ಓದಲಾಗಿದೆ:** 1) ದಿ: 05.07.2005 ಸಂಖ್ಯೆ ಆಕುಕ 178 ಎಂಎಂಸಿ 2004 ರ ಸರ್ಕಾರಿ ಆದೇಶ.

2) ದಿ: 19.09.2005 ಸಂಖ್ಯೆ ಎಸ್‌ಆರ್‌ಎಸ್ (1) 128 / 2005-06 ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನರ್ಸಿಂಗ್ ಕಾಲೇಜಿನ ಸಹಾಯಕ ಪ್ರಾಧ್ಯಪಕರಾದ ಡಾ: ಬಿ.ಟಿ. ಬಸವಂತಪ್ಪ ನವರ ಮೇಲೆ 1957ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 8(ii) ನೇ ನಿಯಮದಡಿಯಲ್ಲಿ ವಾಗ್ದಂಡನೆ ವಿಧಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ದಿ: 24.06.2003 ರಿಂದ 18.09.2003ರ ವರೆಗಿನ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸುವಂತೆ ಕೋರಲಾಗಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 178 ಎಂಎಂಸಿ 2004, ಬೆಂಗಳೂರು, ದಿನಾಂಕ: 24ನೇ ಜನವರಿ 2006**

3. ಬೆಂಗಳೂರಿನ ನರ್ಸಿಂಗ್ ಕಾಲೇಜಿನ ಸಹಾಯಕ ಪ್ರಾಧ್ಯಾಪಕ ಡಾ: ಬಿ.ಟಿ. ಬಸವಂತಪ್ಪನವರು ದಿ: 24.06.2003 ರಿಂದ 18.09.2003ರ ವರೆಗೆ ಕಳೆದ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 228

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಸಹಕಾರ ಸಚಿವಾಲಯ

**ವಿಷಯ:** ನೇರಳೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚನ್ನಪಟ್ಟಣ (ತಾ) ಈ ಸಹಕಾರ ಸಂಘದ ಆಡಳಿತ ಮಂಡಳಿಗೆ ವಿಶೇಷಾಧಿಕಾರಿಯವರ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ಪತ್ರ ಸಂಖ್ಯೆ: ಡಿಎವೈ-1, ಜೆಎಂಸಿ 110/03-04 ದಿನಾಂಕ: 29.11.2005.

**ಪ್ರಸ್ತಾವನೆ:**

ನೇರಳೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ನೇರಳೂರು ಸಂಘಕ್ಕೆ ರಾಮನಗರದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1) ರಡಿ ವಿಶೇಷಾಧಿಕಾರಿಯನ್ನು ದಿನಾಂಕ: 31.08.2002ರಂದು 6 ತಿಂಗಳ ಅವಧಿಗೆ ನೇಮಿಸಿದ್ದು, ಸದರಿ ವಿಶೇಷಾಧಿಕಾರಿಯು ದಿನಾಂಕ: 07.10.2002 ರಂದು ಪ್ರಭಾರ ವಹಿಸಿಕೊಂಡಿದ್ದು, 6 ತಿಂಗಳ ಅವಧಿಯು ದಿನಾಂಕ 06.04.2003ಕ್ಕೆ ಮುಕ್ತಾಯವಾಗಿದ್ದು, ತದನಂತರದ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 07.04.2003 ರಿಂದ 06.04.2004 ರವರೆಗೆ ವಿಸ್ತರಿಸಿರುತ್ತಾರೆ. ಸದರಿ ಆಡಳಿತ ಮಂಡಳಿಗೆ ದಿನಾಂಕ: 03.10.2004 ರಂದು ಚುನಾವಣೆ ನಡೆದಿದ್ದು, ದಿನಾಂಕ: 11.10.2004 ರಂದು ಅಧ್ಯಕ್ಷರ ಚುನಾವಣೆಯು ನಡೆದಿರುವ ಪ್ರಯುಕ್ತ ಒಂದೂವರೆ ವರ್ಷದ ನಂತರದ ಅವಧಿ ಅಂದರೆ ದಿನಾಂಕ: 06.04.2004 ರಿಮದ 11.10.2004 ರವರೆಗೆ ವಿಶೇಷಾಧಿಕಾರಿಯ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸದರಿ ಸಂಘದ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ: 06.04.2004 ರಿಂದ 11.10.2004 ರವರೆಗೆ ವಿಸ್ತರಿಸಲು ಅನುವಾಗುವಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 97 ಸಿಎಲ್ಎಂ 2004, ಬೆಂಗಳೂರು, ದಿನಾಂಕ: 07ನೇ ಜನವರಿ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ನೇರಳೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ನೇರಳೂರು ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ,

"31ರ ಪ್ರಕರಣದಲ್ಲಿ,

(1) ನೇ ಉಪ ಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಹತ್ತೊಂಭತ್ತು (19) ತಿಂಗಳು" ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ :** ಪ್ರಕರಣ 31(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 11.10.2004 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 31(1) ನೇ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 231

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**PERSONAL AND ADMINISTRATIVE REFORMS SECRETARIAT**

**Subject:** Constitution of Steering Committee for implementation of UNDP assisted Project on Capacity Building for Access to Information - Reg.

**Read:** D.O. letter No. 15019/2/2004 - Trg (Access) - Vol-II, dated 10th November 2005, from the Joint Secretary (Training), Department of Personnel and Training, Ministry of Personnel, Public Grievances and Pensions, Government of India.

**PREAMBLE:**

In the letter read above Department of Personnel and Training, Government of India, has intimated that it is implementing UNDP assisted Project on Capacity Building for Access to information and is considering State Government / Administrative Training Institute to be one of the Project Partners and to select two Districts where Project activities are to be undertaken in Karnataka.

It is stated in the said letter that in the Standing Committee Meeting of the Project held on 7th November 2005, the representative of UNDP has opened that the Project has to be implemented in the most backward Districts of the State where NRFG is being implemented and other UNDP Projects have also been undertaken. For this, two most backward Districts, out of three Districts as identified by the Planning Commission, have to be selected for implementation of the Project activities in the State.

In this connection, it is suggested to constitute a Steering Committee consisting of the Members from the Department which is responsible for implementation of Right to Information Act, District Collectors of the two selected Districts and representative of State ATI and to nominate the Nodal Officer from the State ATI for co-rodination of of the Project activities.

Under the above circumstances, it is considered necessary to constitute a Steering Committee for effective implementation of the said Project, as suggested in the letter read above. Hence, the following order.

**ORDER No. DPAR 163 KTP 05, Bangalore, Dated: 18th January 2006**

Government are pleased to constitute a Steering Committee for effective implementation of the UNDP assisted Project on Capacity Building for Access to Information. Chitradurga and Bidar Districts have been selected as most backward Districts of the State to implement the said Project. The Principal Secretary to Government DPAR (Janaspandana Cell), Deputy Commissioners of Chitradurga and Bidar Districts. Director General of Administrative Training Institute, Mysore and Director (Panchayat Raj), Rural Development and Panchayat Raj Department, have been nominated as Members of the Steering Committee and the Smt. M.Sridevi, Faculty (Law), Administrative Training Institute, Mysore, has been nominated as Nodal Officer for co-ordination of the Project activities.

By Order and in the name of the Governor of Karnataka,

**H.K. ANASUYA**

P.R. 236

Under Secretary to Government,

Department of Personnel & Administrative Reforms (Training)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಬಿ.ಎಸ್. ವರದರಾಜು, ಹಿಂದಿನ ಉಪ ನೋಂದಣಾಧಿಕಾರಿ, ಆನೇಕಲ್, ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ಶಿವಾಜಿನಗರ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಂಇ 87 ಮುನೊಸೇ (3) 1999, ಬೆಂಗಳೂರು, ದಿನಾಂಕ: 03.06.2002.
2) ಶ್ರೀ ಜೆ. ನಂದಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಒಪ್ಪಿಗೆ ದೂರವಾಣಿ ಮುಖಾಂತರ ದಿನಾಂಕ: 26.11.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆನೇಕಲ್ ಉಪ ನೋಂದಣಿ ಕಛೇರಿ ಪ್ರಭಾರವನ್ನು ದಿನಾಂಕ: 20.10.1999 ರಂದು ಸರ್ಕಾರದ ಯಾವುದೇ ಆದೇಶವನ್ನು ಪಡೆಯದೆ ವಹಿಸಿಕೊಂಡ ಬಗ್ಗೆ ಶ್ರೀ ಬಿ.ಎಸ್. ವರದರಾಜು, ಹಿರಿಯ ಉಪ ನೋಂದಣಾಧಿಕಾರಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಇಲಾಖಾ ವಿಚಾರಣೆಗೆ ಆದೇಶ ಹೊರಡಿಸಲಾಗಿತ್ತು. ಇಲಾಖಾ ವಿಚಾರಣಾಧಿಕಾರಿಯನ್ನಾಗಿ ಶ್ರೀ ಕೆ.ಆರ್.ವೈದ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾ ನೋಂದಣಾಧಿಕಾರಿ ಕಛೇರಿಯ ಕೇಂದ್ರ ಸ್ಥಾನ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿತ್ತು. ವಿಚಾರಣಾಧಿಕಾರಿಗಳಾದ ಶ್ರೀ ಕೆ.ಆರ್. ವೈದ್ಯ, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ತಮ್ಮ ಆರೋಗ್ಯ ಸರಿ ಇಲ್ಲದೆ ಇರುವುದರಿಂದ ವಹಿಸಿರುವ ವಿಚಾರಣೆಯನ್ನು ನಡೆಸಲು ಸಾದ್ಯವಾಗುತ್ತಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ (2) ರಲ್ಲಿ ಶ್ರೀ ಜೆ. ನಂದುಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ಸದರಿ ಇಲಾಖಾ ವಿಚಾರಣೆ

ನಡೆಸಲು ಒಪ್ಪಿಗೆ ನೀಡಿರುವುದರಿಂದ ಶ್ರೀ ಕೆ.ಆರ್. ವೈದ್ಯ ಅವರ ಬದಲಿಗೆ ಶ್ರೀ ಜೆ. ನಂದಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 87 ಮುನೊಸೇ (3) 1999, ಬೆಂಗಳೂರು, ದಿನಾಂಕ: 31ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 87 ಮುನೋಸೇ (3) 1999, ದಿನಾಂಕ: 03.06.2002 ರನ್ನು ಭಾಗಶಃ ಮಾರ್ಪಡಿಸಿ ಶ್ರೀ ಕೆ.ಆರ್. ವೈದ್ಯ, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಇವರ ಬದಲಿಗೆ ಶ್ರೀ ಜೆ. ನಂದಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಿ ಆದೇಶಿಸಲಾಗಿದೆ. ಮತ್ತು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಲು ಕ್ರಮ ಕೈಗೊಳ್ಳಬೇಕೆಂದು ಸೂಚಿಸಲಾಗಿದ್ದು, ಷರತ್ತಿನ ಪ್ರಕಾರ ಸಂಭಾವನೆಯಾದ ರೂ. 5,000/- (ಐದು ಸಾವಿರ ರೂಪಾಯಿಗಳು) ಮಾತ್ರ ವಿಚಾರಣಾಧಿಕಾರಿಗಳಿಗೆ ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿದೆ. ಸದರಿ ವೆಚ್ಚವನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ವೇತನ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 237

**ಶಿವಲಿಂಗ**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## REVENUE SECRETARIAT

## CIRCULAR

**No. RD 110 LRA 2005, Bangalore, Dated: 30th January 2006**

Consequent on the striking down of Inam Laws under Karnataka Act No. 26 of 1979, as ultra vires as per the decision of Shri Kudli Shringeri Samsthana case, by the Hon'ble High Court (decision reported in ILR 1992 Kar. 1827 (W.P. Nos 7230 and 2590/1979), Government in their Circular No. RD INM 97, dated 30.8.1997 has issued instructions to the effect that the matters pending under Inam Laws - the Mysore (Personal and Miscellaneous) Inams Abolition Act, 1954, the Mysore (Religious and Charitable) Inams Abolition Act, 1955, etc. have to be dealt by the Deputy Commissioner of the Districts. Accordingly, the Land Tribunals had transferred all those cases that were pending with them consequent on remand by the Hon'ble High Court etc., to the Deputy Commissioners.

2. Recently the Hon'ble Supreme Court of India in its judgement dated 28.4.2005 in Civil Appeal Nos. 5684-5686/1999 c/w Civil Appeal No. 5687/1999 (M.B. Ramachandran Vs. Gowramma and Others) has held as follows :

"..... *that the judgement of the High Court in Shri Kudli Shringeri Maha Samsthanam in so far as it declared the Karnataka Inam Abolition (Amendment) Act. 1979 (Act 26 of 1979) void in its entirety is not correct. At best, the High Court could have declared the amendments brought about by Section 3 of aforesaid Act to the Mysore Act 18 of 1955 as ultra vires, since the question of validity of the amendments to the Mysore Act 1of 1955 was not in issue. We order accordingly. Civil Appeal No. 5687/99 is allowed to the extent indicated above.*

*However, notwithstanding the fact that the said judgement is modified, we direct that if after 24.4.1992 the Deputy Commissioner has disposed of matters under the Mysore Act 1 of 1955 which fell within his jurisdiction, the said orders will not be affected by this judgement and are saved. But, from today onwards, the jurisdiction shall be exercised by the Land Tribunal, including the matters pending before the Deputy Commissioner. This, however, will not prevent the parties from challenging the vires of the Amendment Act of 1979 in so far as it relates to Mysore Act 1 of 1955. However, we should not be understood to have expressed any opinion on the merit of the cases, nor on the validity or invalidity of the other provisions of the Amendment Act, 1979 (Act 26 of 1979) or Mysore Act 1 of 1955."*

3. From the above order of the Hon'ble Supreme Court of India, it is clear that from the date of said order, the Deputy Commissioner's shall not deal with the matters falling under Mysore (Personal and Miscellaneous) Inam Abolition Act, 1955 (Act No. 1 of 1955) w.e.f. 28.4.2005 and the same has to be dealt by the concerned Land Tribunals. But in matters falling under Karnataka (Religious and Charitable) Inam Abolition Act, 1955 (Act No. 18 of 1955) the Deputy Commissioner are empowered to deal with the case.

4. In the light of decision of the Hon'ble Supreme Court the Deputy Commissioners are hereby directed to transfer all the matters pending under the Mysore (Personal and Miscellaneous) Inam Abolition Act, 1954 (Act No. 1 of 1955) the concerned Land Tribunal for disposal immediately. However, Deputy

Commissioners are empowered and shall continue to deal with the cases falling under Karnataka (Religious and Charitable) Inam Abolition Act, 1955 (Act No. 18 of 1955). This is in supersession of circular dated 30.8.1997 vide No. RD 90 INM 97.

**B. CHIKKARAJU**

P.R. 238

Under Secretary to Government
Revenue Department (Land Reforms).

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಆನಾಸ 63 ಡಿಆರ್‌ಎ 04 (ಭಾಗ-1), ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2006.**

**ವಿಷಯ:** ರಾಜ್ಯದಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ನ್ಯಾಯ ಬೆಲೆ (ಅಂಗಡಿಗಳನ್ನು ಗ್ರಾಮ ಪಂಚಾಯತ್‌ಗಳ ಮೇಲ್ವಿಚಾರಣೆಗೆ ವರ್ಗಾಯಿಸುವ ಕುರಿತು.

**ಸರ್ಕಾರಿ ಆದೇಶ ಸಂ: ಆನಾಸ 63 ಡಿಆರ್‌ಎ 04, ದಿ: 12.7.05ಕ್ಕೆ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ :**

1. ಆದೇಶದ ಪುಟ: 1 ರಲ್ಲಿನ ಆದೇಶ ಭಾಗದ (ಎ) ಅಂಶದ ಕ್ರಮ ಸಂಖ್ಯೆ 5 ರ ನಂತರ ಈ ಕೆಳಕಂಡ ಟಿಪ್ಪಣಿಯನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

**ಟಿಪ್ಪಣಿ :-** "ಸಾಮಾಜಿಕ ನ್ಯಾಯ ಸಮಿತಿಯಲ್ಲಿರುವ ಅಧ್ಯಕ್ಷರು ನ್ಯಾಯ ಬೆಲೆ ಅಂಗಡಿ ಮಾಲೀಕರಾಗಿದ್ದರೆ, ಸಾಮಾಜಿಕ ನ್ಯಾಯ ಸಮಿತಿಯ ಉಪಾಧ್ಯಕ್ಷರನ್ನು ಹಾಗೂ ಗ್ರಾಮ ಪಂಚಾಯತ್ ಸದಸ್ಯರುಗಳಲ್ಲಿ ನ್ಯಾಯ ಬೆಲೆ ಅಂಗಡಿ ಮಾಲೀಕರು ಸದಸ್ಯರಾಗಿದ್ದರೆ, ಅವರುಗಳನ್ನು ಆಹಾರ ಖಾತರಿ ಸಮಿತಿಯಲ್ಲಿ ನೇಮಕಗೊಳಿಸದೆ, ಇತರೆ ಸದಸ್ಯರುಗಳನ್ನು ಒಳಗೊಂಡಂತೆ ರಚಿಸುವಂತೆ ಸೂಚಿಸಿದೆ".

2. ಸದರಿ ಆದೇಶದ ಪು: 2 ರಲ್ಲಿನ (ಡಿ) ಭಾಗದಲ್ಲಿನ 10ನೇ ಸಾಲಿನಲ್ಲಿ ಬರುವ **ನಿರ್ವಹಿಸುವುದು** ಎಂಬ ಪದದ ನಂತರ ಮುಂದಿನ ವಿಷಯವನ್ನು ಕೈಬಿಟ್ಟು ಈ ಕೆಳಗಿನಂತೆ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

"ಇನ್ನು ಮುಂದೆ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ಆಹಾರಧಾನ್ಯಗಳನ್ನು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಆಯುಕ್ತರು ನೇರವಾಗಿ ತಾಲ್ಲೂಕುವಾರು ಮತ್ತು ನ್ಯಾಯ ಬೆಲೆ ಅಂಗಡಿವಾರು ಪಡಿತರ ಪದಾರ್ಥಗಳ ಹಂಚಿಕೆಯನ್ನು ರಾಜ್ಯ ಮಟ್ಟದಲ್ಲಿ ಮಾಡುವುದು".

ಇನ್ನುಳಿದ ಅಂಶಗಳಲ್ಲಿ ಯಾವುದೇ ಬದಲಾವಣೆ ಇಲ್ಲದೇ ಯಥವತ್ತಾಗಿ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎನ್. ಶಾಂತಕುಮಾರಿ**

ಪಿ.ಆರ್. 245

ಸರ್ಕಾರದ ಅಧೀನ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

**ENERGY SECRETARIAT**

**Subject:** Karnataka Electricity Regulatory Commission – Release of Third Quarter Fund to KERC out of the provision made in the Budget Estimates for the year 2005-06. – Orders reg.

**Read:** Letter No.F/04/3/1868 dated 12.12.2005

**PREAMBLE:**

A sum of Rs.206.00 lakhs has been provided in the Budget estimates for the year 2005-06 under the Head of Account 2801-80-101-1-07- KERC-101-GIA (Non-Plan). In the letter dated 7.10.2005 read above, Secretary, KERC has requested to recoup the Permanent Imprest by releasing Rs.71.31 lakhs to meet the expenditures in the Third quarter of the year 2005-2006 (based on actual expenditure) in order to maintain the balance of Rs.75.00 lakhs in the Permanent Imprest Account sanctioned vide G.O dated 19.10.2002. Hence, this order.

**GOVERNMENT ORDER NO. EN 67 PSR 2005, BANGALORE, DATED: 7th FEBRUARY 2006**

In the circumstances explained in the preamble, Government are pleased to release, the amount of Rs.71.00 lakhs (Rupees Seventy one Lakhs Only) based on the actual expenditure incurred by the Karnataka Electricity Regulatory Commission (KERC) under the Head of Account **"2801-80-101-1-07-KERC-101- GIA (Non-Plan)"** to meet the expenditure for the Third (III) Quarter of the year 2005-06 and to maintain the balance of Rs.75.00 lakhs in the Permanent Imprest Account.

The Principal Secretary to Government, Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No. FD/2162/Exp-I/2005 dated 21.1.2006.

By Order and in the name of the Governor of Karnataka,

**SURESH B. KRISHNAPPANAVAR**

P.R. 244 Under Secretary to Government, Energy Department.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಶ್ರೀ ಟಿ.ಎ. ರಾಮಬಾಬು, ಸಹಾಯಕ ಔಷಧ ನಿಯಂತ್ರಕರು, ಮಂಗಳೂರು ವೃತ್ತ, ಮಂಗಳೂರು ಇವರು ಲೋಕಾಯುಕ್ತದ ಬಲೆಗೆ ಸಿಲುಕಿಬಿದ್ದಿರುವುದರಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** 1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ / ಐಎನ್‌ವಿ (ಜಿ) / ಎಂ-14 / ಸಿ ಆರ್-5 / 2005 ಮಂಗಳೂರು, ದಿನಾಂಕ: 9.8.2005.

**ಪ್ರಸ್ತಾವನೆ:**

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಟಿ.ಎ. ರಾಮಬಾಬು, ಸಹಾಯಕ ಔಷಧ ನಿಯಂತ್ರಕರು, ಮಂಗಳೂರು ವೃತ್ತ, ಮಂಗಳೂರು ಇವರು ದಿನಾಂಕ: 9.12.2005 ರಂದು ಶ್ರೀ ಅಬ್ದುಲ್ ಜಲೀಲ್, ಮೆಡಿಕಲ್ ಸ್ಟೋರ್, ದೇರಳಕಟ್ಟೆ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ ಇವರು ಮೆಡಿಕಲ್ ಸ್ಟೋರ್‌ನಲ್ಲಿ ಇಟ್ಟುಕೊಂಡಿದ್ದ 25 ಫಿಜಿಸಿಷಿಯನ್ ಸ್ಯಾಂಪಲ್ ಇಂಜೆಕ್ಷನ್‌ಗಳ ಕುರಿತು ಕೇಸ್ ಬುಕ್ ಮಾಡದೇ ಇರಲು ಹಾಗೂ ಅವರ ಮೇಲೆ ಶಿಸ್ತು ಕ್ರಮ ತೆಗೆದುಕೊಳ್ಳದೇ ಇರುವುದಕ್ಕೆ ಸದರಿ ಶ್ರೀ ಅಬ್ದುಲ್ ಜಲೀಲ್‌ರವರಿಂದ ರೂ. 10,000 ಗಳ ಅಕ್ರಮ ಸಂಭಾವನೆಯನ್ನು ಕೇಳಿ ಪಡೆಯುತ್ತಿರುವಾಗ ಪೊಲೀಸ್ ಮಹಾನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಗಳೂರು, ಇವರು ಬೀಸಿದ ಟ್ರ್ಯಾಪ್ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವುದಾಗಿ ವರದಿ ಮಾಡಿರುತ್ತಾರೆ.

ಶ್ರೀ ಟಿ.ಎ. ರಾಮಬಾಬುರವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ದೃಢಪಟ್ಟಿರುವುದರಿಂದ ಹಾಗೂ ಅವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟುಮಾಡಿ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅಮಾನತ್ತಿನಲ್ಲಿಡುವಂತೆ ಹಾಗೂ ಅವರ ಲೀನ್ (ಸ್ಥಾನ) ನನ್ನು ಬೇರೆ ಕಡೆಗೆ ವರ್ಗಾಯಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು, ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ. ಶ್ರೀ ಟಿ.ಎ. ರಾಮಬಾಬು, ಸಹಾಯಕ ಔಷಧ ನಿಯಂತ್ರಕರು, ಮಂಗಳೂರು ವೃತ್ತ, ಮಂಗಳೂರು ಇವರ ಮೇಲೆ ಲೋಕಾಯುಕ್ತ ಕಛೇರಿಯವರು ಮುಂದಿನ ತನಿಖೆ ಕೈ ಗೊಳ್ಳಲು ಅನುವಾಗುವಂತೆ ಸದರಿಯವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 186 ಐಎಂಎಂ 2005, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10ರ ಉಪನಿಯಮ (1) (ಎ) ರನ್ವಯ ಔಷಧ ನಿಯಂತ್ರಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಟಿ.ಎ. ರಾಮಬಾಬು, ಸಹಾಯಕ ಔಷಧ ನಿಯಂತ್ರಕರು, ಮಂಗಳೂರು ವೃತ್ತ, ಮಂಗಳೂರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದ ವರೆಗೆ ಅವರ ವಿರುದ್ಧ ಲೋಕಾಯುಕ್ತ ತನಿಖೆ / ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನಲ್ಲಿಡಲಾದ ಅವಧಿಯಲ್ಲಿ ಈ ಅಧಿಕಾರಿಯು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನಲ್ಲಿಡಲಾದ ಅವಧಿಯಲ್ಲಿ ಈ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.246 **ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ: ಸುಭಾಷ್ ಪಿ. ಪಾಟೀಲ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬನಾಡಿ, ಬೆಳಗಾಂ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (2) : 120 : 2002-03 ದಿನಾಂಕ: 28.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಡಾ; ಸುಭಾಷ್ ಪಿ. ಪಾಟೀಲ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬನಾಡಿ, ಬೆಳಗಾಂ ಜಿಲ್ಲೆ ಇವರು ದಿನಾಂಕ: 09.1.1989 ರಿಂದ 21.01.1989 ರ ವರೆಗೆ ತರಬೇತಿಗೆ ತೆರಳಿ ನಂತರ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತ ಗೈರುಹಾಜರಾಗಿರುತ್ತಾರೆ. ಆ ಪ್ರಯುಕ್ತ ಸದರಿಯವರಿಗೆ ಕಾರಣ ಕೇಳುವ ನೋಟೀಸ್ ಜಾರಿಗೊಳಿಸಲಾಗಿದ್ದರೂ ಯಾವುದೇ ಹೇಳಿಕೆ ಸಲ್ಲಿಸಿರುವುದಿಲ್ಲ. ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯನ್ನು ಪೂರೈಸಿರುವುದಿಲ್ಲವಾದ್ದರಿಂದ

ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 50 ಹೆಚ್‌ಎಸ್‌ಹೆಚ್ 2006, ಬೆಂಗಳೂರು, ದಿನಾಂಕ: 01ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಸುಭಾಷ್ ಪಿ. ಪಾಟೀಲ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬನಾಡಿ, ಬೆಳಗಾಂ ಜಿಲ್ಲೆ ಇವರು ದಿನಾಂಕ: 09.01.1989 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 09.01.1989 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977 ರ ನಿಯಮ 6(1) 2ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 247

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** "ಕುಗ್ರಾಮ - ಸುವರ್ಣಗ್ರಾಮ" ಯೋಜನೆಯಲ್ಲಿ ಬದಲಾವಣೆ ಕುರಿತು.

**ಉಲ್ಲೇಖ:**
1) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 79 ಯೋಉಮಾ 2005 ದಿ: 15.06.2005.
2) ಸಚಿವ ಸಂಪುಟ ಪ್ರಕರಣ ಸಂಖ್ಯೆ: ಸಿ. 382 / 2005 ದಿನಾಂಕ 31.12.2002.
3) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 79 ಯೋಉಮಾ 2005 ದಿ: 10.01.2006.

**ಪ್ರಸ್ತಾವನೆ:**

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಗ್ರಾಮಾಂತರ ವಿಧಾನಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ತಲಾ ಒಂದು ಮತ್ತು ಪ್ರತಿ ತಾಲ್ಲೂಕಿಗೆ ಕನಿಷ್ಠ ಒಂದು ಅತ್ಯಂತ ಹಿಂದುಳಿದ ಗ್ರಾಮವನ್ನು (212) ಹಾಗೂ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವರು ಆಯ್ಕೆ ಮಾಡಬಹುದಾದ ಒಂದು ಗ್ರಾಮದಂತೆ (27) ಒಟ್ಟು 239 ಗ್ರಾಮಗಳನ್ನು **"ಕುಗ್ರಾಮ - ಸುವರ್ಣಗ್ರಾಮ"** ಯೋಜನೆಯಡಿ ಆಯ್ಕೆ ಮಾಡಿ ನಿಗದಿತ ಮಾರ್ಗಸೂಚಿಯನ್ವಯ ಅನುಷ್ಠಾನಗೊಳಿಸಲು ಉಲ್ಲೇಖ (3)ರ ಸರ್ಕಾರಿ ಆದೇಶದ ಮೂಲಕ ಅನುಮೋದನೆ ನೀಡಲಾಗಿತ್ತು. ಆದರೆ ಕೆಲವು ಶಾಸಕರಿಗೆ 2 ರಿಂದ 3 ತಾಲ್ಲೂಕುಗಳು ಅವರ ಮತಕ್ಷೇತ್ರ ವ್ಯಾಪ್ತಿಯಲ್ಲಿ ಬರುವುದರಿಂದ ಒಂದೇ ತಾಲ್ಲೂಕಿನಲ್ಲಿ 2 ಗ್ರಾಮಗಳು ಆಯ್ಕೆಯಾಗಿವೆ. ಸಚಿವ ಸಂಪುಟ ನಿರ್ಧರಿಸಿದಂತೆ ಗ್ರಾಮಾಂತರ ವಿಧಾನಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ತಲಾ ಒಂದು ಮತ್ತು ಪ್ರತಿ ತಾಲ್ಲೂಕಿಗೆ ಕನಿಷ್ಠ ಒಂದು ಅತ್ಯಂತ ಹಿಂದುಳಿದ ಗ್ರಾಮದಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು 243 ಗ್ರಾಮಗಳನ್ನು ಈ ಯೋಜನೆಯಡಿ ಆಯ್ಕೆ ಮಾಡಬೇಕಾಗುತ್ತದೆ. ಆದುದರಿಂದ ಕಾರಣ ಉಲ್ಲೇಖ (3)ರ ಆದೇಶವನ್ನು ಪರಿಷ್ಕರಿಸಬೇಕಾಗಿರುತ್ತದೆ. ಆದಕಾರಣ ಈ ಕೆಳಗಿನ ಆದೇಶ ಹೊರಡಿಸಿದೆ. ಜಿಲ್ಲಾ ಉಸ್ತುವಾರಿ ಸಚಿವರಿಗೆ ಜಿಲ್ಲೆಗೆ ಒಂದರಂತೆ ಸೇರಿ ಒಟ್ಟು 212ರ ಬದಲಿಗೆ 216 ಗ್ರಾಮಗಳನ್ನು ಆಯ್ಕೆ ಮಾಡಬೇಕಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 79 ಯೋಉಮಾ 2005, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ 2006**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಉಲ್ಲೇಖ (3)ರಲ್ಲಿಯ ಆದೇಶವನ್ನು ಮಾರ್ಪಡಿಸಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಗ್ರಾಮಾಂತರ ವಿಧಾನಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ತಲಾ ಒಂದು ಮತ್ತು ಪ್ರತಿ ತಾಲ್ಲೂಕಿಗೆ ಕನಿಷ್ಠ ಒಂದು ಅತ್ಯಂತ ಹಿಂದುಳಿದ ಗ್ರಾಮವನ್ನು (216) ಹಾಗೂ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವರು ಆಯ್ಕೆ ಮಾಡಬಹುದಾದ ಒಂದು ಗ್ರಾಮದಂತೆ (27) ಒಟ್ಟು 243 ಗ್ರಾಮಗಳನ್ನು **"ಕುಗ್ರಾಮ-ಸುವರ್ಣಗ್ರಾಮ"** ಯೋಜನೆಯಡಿ ಆಯ್ಕೆ ಮಾಡಿ ನಿಗದಿತ ಮಾರ್ಗಸೂಚಿಯನ್ವಯ ಅನುಷ್ಠಾನಗೊಳಿಸಲು ಅನುಮೋದನೆಯನ್ನು ನೀಡಲು ಸರ್ಕಾರವು ಹರ್ಷಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಷಣ್ಮುಖ**

ಪಿ.ಆರ್. 253

ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡುವ ಅಭ್ಯರ್ಥಿಗಳ ಸಂಖ್ಯೆಯನ್ನು ಪ್ರತಿ ಜಿಲ್ಲೆಗೆ 10 ರಂತೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಕಇ 349 ಪಕವಿ 2005, ದಿನಾಂಕ: 06.12.2005.

**ಸರ್ಕಾರದ ಆದೇಶ ಸಂಖ್ಯೆ: ಸಕಇ 349 ಪಕವಿ 05, ಬೆಂಗಳೂರು, ದಿನಾಂಕ: 28ನೇ ಜನವರಿ 2006**

ಸರ್ಕಾರದ ಆದೇಶ ಸಂಖ್ಯೆ: ಸಕಇ 349 ಪಕವಿ 2005, ದಿನಾಂಕ: 26.12.2005ನ್ನು ಭಾಗಶಃ ಮಾರ್ಪಡಿಸಿ ಸಮಾಜ ಕಲ್ಯಾಣ ಇಲಾಖೆಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ಪಡೆಯುತ್ತಿರುವ ಪರಿಶಿಷ್ಟ ಜಾತಿಯ ಕಾನೂನು ಪದವೀಧರ ಸಂಖ್ಯೆಯನ್ನು ಈಗಿರುವ ಅಭ್ಯರ್ಥಿಗಳ ಸಂಖ್ಯೆಯ ಜೊತೆಗೆ ಪ್ರತಿ ಜಿಲ್ಲೆಗೆ 10 ರಂತೆ 27 ಜಿಲ್ಲೆಗಳಿಂದ 270 ಅಭ್ಯರ್ಥಿಗಳನ್ನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಮೀಸಲಾತಿ ಅನುಪಾತದನ್ವಯ ಹೆಚ್ಚಿಸಿ ಆದೇಶಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2005-06ನೇ ಸಾಲಿನಲ್ಲಿ ವಿಶೇಷ ಘಟಕ ಯೋಜನೆಯಡಿ ಗುಂಪುಗೂಡಿಸಿದ ಲೆಕ್ಕ ಶೀರ್ಷಿಕೆ 2225-01-102-0-08 (ಯೋಜನೆ) ರಡಿ ಒದಗಿಸಿರುವ ಅನುದಾನದಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 262

**ಹೆಚ್. ಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ಕಾರ್ಮಿಕ ಸಚಿವಾಲಯ**

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಗೆ ನಿರ್ದೇಶಕರ, ಸೀನಿಯರ್ ವೇತನ ಶ್ರೇಣಿ ಹುದ್ದೆಯನ್ನು ಸೃಜಿಸುವ ಬಗ್ಗೆ ಮಂಜೂರಾತಿ ಕುರಿತು.

**ಓದಲಾಗಿದೆ:** 1) ದಿನಾಂಕ 18.8.2005ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 412 ಸೇಆಸೆ 2005.

2) ನಿರ್ದೇಶಕರ ದಿನಾಂಕ 7.10.2005ರ ಪತ್ರ ಸಂಖ್ಯೆ: ಉತನಿ / ಉದ್ಯೋಗ / ಆಡಳಿತ-1 / ವಿವ-81 / 2005-06.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ 18.8.2005ರ ಅನಧಿಕೃತ ಟಿಪ್ಪಣಿಯಲ್ಲಿ, ಮುಂಚೆ ಐ.ಎ.ಎಸ್. ಹಿರಿಯ ವೇತನ ಶ್ರೇಣಿಯಲ್ಲಿದ್ದ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಕೇಡರ್ ಹುದ್ದೆಯನ್ನು ದಿನಾಂಕ 6.11.2004 ರಿಂದ ಅನ್ವಯಿಸುವಂತೆ ಐ.ಎ.ಎಸ್. ಸೂಪರ್ ಟೈಂ ವೇತನ ಶ್ರೇಣಿಗೆ ಸೇರ್ಪಡೆ ಮಾಡಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಎಂದು ಪದೋನ್ನತಿ ಮಾಡಲಾಗಿದೆ. ಆದರೆ ಅನಂತರವೂ ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಯಲ್ಲಿರುವ ಅಧಿಕಾರಿಯವರನ್ನೇ ನಿರ್ದೇಶಕರ ಹುದ್ದೆಯಲ್ಲಿ ಮುಂದುವರೆಸಲಾಗಿದೆ ಹಾಗೂ ಸೂಪರ್ ಟೈಂ ವೇತನ ಶ್ರೇಣಿಯಲ್ಲಿರುವ ಆಯುಕ್ತರ ಹುದ್ದೆಯನ್ನು ದಿನಾಂಕ 6.11.2004ರಿಂದ ನಿಲಂಬನೆಯಲ್ಲಿಡಲಾಗಿದೆ. ಹೀಗಾಗಿ ದಿನಾಂಕ 4.8.2005ರ ಪತ್ರದಲ್ಲಿ ಮಹಾಲೇಖಪಾಲರು ತಿಳಿಸಿದಂತೆ ನಿರ್ದೇಶಕರ ಒಂದು ಹುದ್ದೆಯನ್ನು ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಯಲ್ಲಿ ದಿನಾಂಕ 6.11.2004 ರಿಂದ ಸೃಜಿಸುವ ಅಗತ್ಯವಿದೆ ಎಂದು ತಿಳಿಸಲಾಗಿದೆ. ಆದ್ದರಿಂದ ದಿನಾಂಕ 6.11.2004 ರಿಂದ 6.11.2005 ರವರೆಗೆ ಅಥವಾ ಆಯುಕ್ತರ ಹುದ್ದೆ Review ಮಾಡುವವರೆಗೆ (ಇದರಲ್ಲಿ ಯಾವುದು ನಂತರವೋ ಅಲ್ಲಿಯವರೆಗೆ) ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ Ex-Cadre ಹುದ್ದೆಯನ್ನು ಐ.ಎ.ಎಸ್. ಸೀನಿಯರ್ ವೇತನ ಶ್ರೇಣಿಯಲ್ಲಿ ಸೃಜಿಸುವ ಅಗತ್ಯ ಕಂಡುಬಂದಿದೆ.

ಮೇಲೆ ಓದಲಾದ (2) ದಿನಾಂಕ 7.10.2005 ನಿರ್ದೇಶಕರ ಪತ್ರದಲ್ಲಿ, ನಿರ್ದೇಶಕರ ಹುದ್ದೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವೆಯ ಹಿರಿಯ ಶ್ರೇಣಿಯ ಅಧಿಕಾರಿಯವರಿಗೆ ವೇತನ ಮತ್ತಿತರ ಭತ್ಯೆಗಳನ್ನು ಅಧಿಕಾರಿಸಲು ನಿರ್ದೇಶಕರು (Ex-Cadre) ಸೀನಿಯರ್ ವೇತನ ಶ್ರೇಣಿ ಹುದ್ದೆ ಸೃಜಿಸುವ ಬಗ್ಗೆ ಆಡಳಿತಾತ್ಮಕ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಆದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 272 ಇಟಿಐ 2005, ಬೆಂಗಳೂರು, ದಿನಾಂಕ: 28ನೇ ಜನವರಿ 2006**

ಉದ್ಯೋಗ ಮತ್ತು ತರಬೇತಿ ಇಲಾಖೆಯ ನಿರ್ದೇಶಕರ Ex-Cadre ಹುದ್ದೆಯನ್ನು ಭಾರತೀಯ ಆಡಳಿತ ಸೇವೆ ಸೀನಿಯರ್ ವೇತನ ಶ್ರೇಣಿಯಲ್ಲಿ ದಿನಾಂಕ 6.11.2004 ರಿಂದ 6.11.2005 ರವರೆಗೆ ಅಥವಾ ಆಯುಕ್ತರ ಹುದ್ದೆಯನ್ನು ಪರಾಮರ್ಶಿಸುವವರೆಗೆ ಇದರಲ್ಲಿ ಯಾವುದು ನಂತರವೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 412 ಸೇಆಸೆ 2005 ದಿ: 8.11.2005 ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 282 ವೆಚ್ಚ- 9/2005 ದಿನಾಂಕ 17.1.2006 ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 270

**ಎಂ.ಪಿ. ನಾಗರಾಜ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**ಕಂದಾಯ ಸಚಿವಾಲಯ**

**ವಿಷಯ:** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ನಯಂಪಳ್ಳಿ ಗ್ರಾಮದ ಶ್ರೀ ಗೋಪಾಲಕೃಷ್ಣ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ / ಸಿಆರ್ / 45 / 2004-05 ದಿನಾಂಕ: 27.09.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ನಯಂಪಳ್ಳಿ ಗ್ರಾಮದ ಸಂತೆಕಟ್ಟೆ ಶ್ರೀ ಗೋಪಾಲಕೃಷ್ಣ ದೇವಸ್ಥಾನವು ಅಧಿಸೂಚಿತ ಸಂಸ್ಥೆಯಾಗಿದ್ದು, ಶ್ರೀ ಕಾಶೀಮಠ ಸಂಸ್ಥಾನ, ವಾರಣಾಸಿ ಇದರ ಅಧೀನದಲ್ಲಿರುವ ಗೌಡ ಸಾರಸ್ವತ ಬ್ರಾಹ್ಮಣ ಸಮಾಜಕ್ಕೆ ಸೇರಿದ ದೇವಸ್ಥಾನವಾಗಿರುವುದರಿಂದ ಈ ದೇವಸ್ಥಾನವನ್ನು ನೂತನ ಕಾಯಿದೆ ನಿಧಿ 1 4(ii) ರ ಪ್ರಕಾರ ಇಲಾಖಾ ವ್ಯಾಪ್ತಿಯಿಂದ ಹೊರತುಪಡಿಸಿ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡಬಹುದೆಂದು ಶಿಫಾರಸ್ಸು ಮಡಿರುತ್ತಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 113 ಮುಆಬಿ 2005, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(ii) ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003 ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉಡುಪಿ ಜಿಲ್ಲೆ, ಉಡುಪಿ ತಲ್ಲೂಕು, ಪುತ್ತೂರು ಗ್ರಾಮ ನಯಂಪಳ್ಳಿ ಶ್ರೀ ಗೋಪಾಲಕೃಷ್ಣ ದೇವಸ್ಥಾನ ಕ್ರಮ ಸಂಖ್ಯೆ: 354, ಪುಟ ಸಂಖ್ಯೆ: 718ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 275

**ಕೆ. ಜಯಚಂದ್ರ**

ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

**ಕಂದಾಯ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಕಂಇ 17 ಆರ್‌ಇಹೆಚ್ 2004, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2006**

ಸರ್ಕಾರಿ ಆದೇಶ ಸಂಖ್ಯೆ: ಕಂಇ 17 ಆರ್‌ಇಹೆಚ್ 2004, ದಿನಾಂಕ: 11.10.2003 ರಲ್ಲಿ ಆದೇಶ ಭಾಗದ 2ನೇ ಪ್ಯಾರಾದ ಬದಲಿಗೆ ಈ ಕೆಳಕಂಡ ಪ್ಯಾರವನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

"2. ಸಂತ್ರಸ್ತ ಕುಟುಂಬಗಳಲ್ಲಿ ಜಮೀನು ಮಂಜೂರಾತಿಗಾಗಿ ಅರ್ಜಿ ಸಲ್ಲಿಸಿದ 115 ಕುಟುಂಬಗಳಿಗೆ ಜಮೀನು ಮಂಜೂರಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸಿ ಒಂದು ವೇಳೆ ಜಮೀನು ಮಂಜೂರಾಗದೇ ಇದ್ದಲ್ಲಿ, ಅವರುಗಳಿಗೆ ಎಕ್ಸ್-ಗ್ರೇಷಿಯ ಮೊತ್ತವನ್ನು ಪಾವತಿ ಮಾಡತಕ್ಕದ್ದು. ಈ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳಿಗೆ ನೀಡಿದೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 276

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ
(ಪುನರ್ವಸತಿ ಮತ್ತು ಭೂಸ್ವಾಧೀನ).

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಂಕಇ 34 ರಾಪಸಿ 2004, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2006**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂಕಇ 34 ರಾಪಸಿ 2004 ದಿನಾಂಕ: 26.12.2005ರ 5ನೇಯ ಪಂಕ್ತಿಯಲ್ಲಿನ "ವೇತನ ಶ್ರೇಣಿ ರೂಪಾಯಿ 7400-13200" ಎಂಬುದರ ಬದಲಾಗಿ **"ವೇತನ ಶ್ರೇಣಿ ರೂ. 7400-13120"** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 280

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಕೈಗೊಳ್ಳುವ ಸಂರಕ್ಷಣಾ ಕಾರ್ಯಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿ ನೀಡಲು ಸಮಿತಿ ರಚಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 201 ಕೆಎಂಯು 2002 ದಿನಾಂಕ: 22.5.2002.
2) ಸರ್ಕಾರದ ಆದೇಶ ಸಂಖ್ಯೆ: ಸಂಕಇ 201 ಕೆಎಂಯು 2002 ದಿನಾಂಕ: 27.6.2002.
3) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ನಿರ್ದೇಶಕರ ಪತ್ರ ಸಂಖ್ಯೆ: ಡಿಎಎಂ : ಸಂವಿ / ದ.ವ / ಮೈಸೂರು : 2005-06 ದಿನಾಂಕ: 28.11.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ವತಿಯಿಂದ ಕೈಗೊಳ್ಳುವ ಸಂರಕ್ಷಣಾ ಕಾಮಗಾರಿಗಳ ಅಂದಾಜು ಮೊತ್ತವು ರೂ. 5.00 ಲಕ್ಷ ರೂಪಾಯಿಗಳನ್ನು ಮೀರಿದಲ್ಲಿ ಅಂತಹ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿ ನೀಡುವ ಬಗ್ಗೆ ತಾಂತ್ರಿಕ ಸಮಿತಿಯನ್ನು ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಮೂರು ಜನ ಅದಿಕಾರೇತರ ತಾಂತ್ರಿಕ ಸದಸ್ಯರನ್ನು ಮೂರು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ. ತಾಂತ್ರಿಕ ಸಮಿತಿಯ ಮೂರು ಜನ ಅಧಿಕಾರೇತರ ಸದಸ್ಯರೆಂದರೆ

(1) ಶ್ರೀ ಜಿ. ಅಶ್ವತ್ಥನಾರಾಯಣ, ನಿವೃತ್ತ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ.

(2) ಶ್ರೀ ಹೆಚ್. ಅಪ್ಪಾಜಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ.

(3) ಶ್ರೀ ಎಂ.ಎಂ. ರಾಯಚೂರು, ನಿವೃತ್ತ ಉಪ ಇಂಜಿನಿಯರ್, ಭಾರತೀಯ ಪುರಾತತ್ವ ಸರ್ವೇಕ್ಷಣೆ.

ಮೇಲೆ ಓದಲಾದ ಕ್ರಮಸಂಖ್ಯೆ: (3) ರಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಇವರು ಕ್ರಮಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿನ ಮೂರು ಜನ ಅಧಿಕಾರೇತರ ತಾಂತ್ರಿಕ ಸದಸ್ಯರ ಪೈಕಿ ಶ್ರೀ ಅಪ್ಪಾಜಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಇವರು ತಾಂತ್ರಿಕ ಸಮಿತಿಯ ಸದಸ್ಯರಾಗಿ ಮುಂದುವರೆಯಲು ಇಚ್ಛಿಸುವುದಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಅವರಿಂದ ತೆರವಾದ ಸ್ಥಾನಕ್ಕೆ ಶ್ರೀ ಬಿ. ನರಸಿಂಹಯ್ಯ, ನಿವೃತ್ತ ಅಧೀಕ್ಷರು, ಭಾರತೀಯ ಪುರಾತತ್ವ ಸರ್ವೇಕ್ಷಣೆ, ಚೆನ್ನೈ ಇವರನ್ನು ತಾಂತ್ರಿಕ ಸಮಿತಿಗೆ ಹೊಸದಾಗಿ ಸದಸ್ಯರನ್ನಾಗಿ ನೇಮಿಸಿಕೊಂಡು ಉಳಿದ ಇಬ್ಬರು ಸದಸ್ಯರನ್ನು ಒಳಗೊಂಡಂತೆ ಒಟ್ಟು ಮೂರು ಜನ ಅಧಿಕಾರೇತರ ಸದಸ್ಯರನ್ನು ಮತ್ತೆ 3 ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 152 ಕೆಎಂಯು 2005, ಬೆಂಗಳೂರು, ದಿನಾಂಕ: 08ನೇ ಫೆಬ್ರವರಿ 2006**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಕೈಗೊಳ್ಳುವ ಸ್ಮಾರಕಗಳ ಸಂರಕ್ಷಣಾ ಕಾಮಗಾರಿಗಳ ಅಂದಾಜು ರೂ. 5.00 ಲಕ್ಷ ಮೀರಿದರೆ ಅಂತಹ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ಮಂಜೂರಾತಿ ನೀಡಲು ಅದಿಕಾರಯುಕ್ತ ಸಮಿತಿಗೆ ಸರ್ಕಾರದ ಆದೇಶ ಸಂಖ್ಯೆ: ಸಂಕಇ 201 ಕೆಎಂಯು 2002 ದಿನಾಂಕ: 27.6.2002ರಲ್ಲಿ ನೇಮಿಸಲಾದ ಅಧಿಕಾರೇತರ ಸದಸ್ಯರಲ್ಲಿ ಶ್ರೀ ಹೆಚ್. ಅಪ್ಪಾಜಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಲೋಕೋಯೋಗಿ ಇಲಾಖೆ ಇವರನ್ನು ಹೊರತುಪಡಿಸಿ ಉಳಿದ ಇಬ್ಬರು ಅಧಿಕಾರೇತರ ಸದಸ್ಯರ ಅವಧಿಯನ್ನು ಮತ್ತೆ ಮೂರು ವರ್ಷಗಳವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶಿಸಿದೆ.

ಹಾಗೂ ಶ್ರೀ ಹೆಚ್. ಅಪ್ಪಾಜಪ್ಪ, ನಿವೃತ್ತ ಮುಖ್ಯ ಇಂಜನಿಯರ್, ಲೋಕೋಪಯೋಗಿ ಇಲಾಖೆ ಇವರ ಸ್ಥಾನದಲ್ಲಿ ಶ್ರೀ ಬಿ. ನರಸಿಂಹಯ್ಯ, ನಿವೃತ್ತ ಅಧೀಕ್ಷಕರು, ಭಾರತೀಯ ಪುರಾತತ್ವ ಸರ್ವೇಕ್ಷಣೆ, ಚೆನ್ನೈ ಇವರನ್ನು ತಾಂತ್ರಿಕ ಸಮಿತಿಯ ಅಧಿಕಾರೇತರ ಸದಸ್ಯರಾಗಿ ಹೊಸದಾಗಿ ಈ ಆದೇಶದ ದಿನಾಂಕದಿಂದ 3 ವರ್ಷಗಳವರೆವಿಗೆ ನೇಮಿಸಿ ಆದೇಶಿಸಿದೆ. ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ಮಂಜೂರಾತಿ ನೀಡಲು ಸಮಿತಿಯ ಸಭೆಯಲ್ಲಿ, ಅಧಿಕಾರೇತರ ಸದಸ್ಯರಲ್ಲಿ (ಇಂಜಿನಿಯರಿಂಗ್) ಕನಿಷ್ಠ ಒಬ್ಬರಾದರೂ ಸಭೆಗೆ ಹಾಜರಾಗಿರತಕ್ಕದ್ದು.

ಅಧಿಕಾರೇತರ ಸದಸ್ಯರು ಸಭೆಗೆ ಹಾಜರಾದಾಗ ನಿಯಮಾನುಸಾರ ಪ್ರವಾಸ ಹಾಗೂ ದಿನಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 277

**ಎನ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ರಾಜ್ಯದಲ್ಲಿರುವ ಶ್ರೀಗಂಧದ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ಶ್ರೀಗಂಧವನ್ನು ರಿಯಾಯಿತಿ ದರದಲ್ಲಿ ಪೂರೈಸುವ ಬಗ್ಗೆ - ಆದೇಶ

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ ಅಪಜೀ 07 ಎಫ್‌ಎಸ್‌ಡಬ್ಲ್ಯೂ 2003 ದಿನಾಂಕ 03.12.2003.
2) ಸರ್ಕಾರದ ಆದೇಶ ಸಂಖ್ಯೆ ಅಪಜೀ 09 ಎಫ್‌ಎಸ್‌ಡಬ್ಲ್ಯೂ 2002 ದಿನಾಂಕ 26.02.2004.
3) ಸರ್ಕಾರದ ಆದೇಶ ಸಂಖ್ಯೆ ಅಪಜೀ 45 ಎಫ್‌ಎಸ್‌ಡಬ್ಲ್ಯೂ 2005 ದಿನಾಂಕ 04.07.2005.
4) ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ), ಬೆಂಗಳೂರು ಇವರ ದಿನಾಂಕ 05.01.2006ರ ಕ್ರಮಾಂಕ ಎ6 / ಎಸ್‌ಡಿಎಲ್ / ವಿವ - 12 / 98-99ರ ಪತ್ರ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧದ ಡಿಪೋ ಮತ್ತು ಶ್ರೀಗಂಧದ ಕೋಠಿಗಳಲ್ಲಿ ಲಭ್ಯವಿರುವ ಜಾಜ್ಪೋಕಲ್-I, II ಮತ್ತು ಘಟಬದಲಾ ಶ್ರೀಗಂಧದ ಮರಗಳನ್ನು ಕರ್ನಾಟಕ ರಾಜ್ಯದಲ್ಲಿರುವ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ಕ್ರಮಾಂಕ ಅಪಜೀ 38 ಎಫ್‌ಎಸ್‌ಡಬ್ಲ್ಯೂ, 2003ರ ದಿನಾಂಕ 24.11.2003ರ ಸರ್ಕಾರದ ಆದೇಶದಲ್ಲಿ ನಿಗಧಿಗೊಳಿಸಿದ ಮಾರುಕಟ್ಟೆ ದರದ ಶೇಕಡಾ 50ರಷ್ಟು ದರದಂತೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ ಇವರ ಮುಖಾಂತರ ವಿತರಿಸುವ ಸಲುವಾಗಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳುರು ಇವರಿಗೆ ಪೂರೈಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾಗಿರುವ ಆದೇಶದಲ್ಲಿ ರಾಜ್ಯದಲ್ಲಿರುವ ಶ್ರೀಗಂಧದ ಕರಕುಶಲ ಕರ್ಮಿಗಳ ಉಪಯೋಗಕ್ಕಾಗಿ ಸರ್ಕಾರದ ಶ್ರೀಗಂಧದ ಕೋಠಿ ಮತ್ತು ಶ್ರೀಗಂಧದ ಡಿಪೋಗಳಿಂದ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ sandalwood billets (Class I, II & III), Ghotla, Ghatabadla, Bagardad, Roots (I, II & III) Jajpokal (I & II) ವರ್ಗದ ಶ್ರೀಗಂಧವನ್ನು ಆಯ್ಕೆ ಮಾಡಲು ಹಾಗೂ ಸದರಿ ನಿಗಮಕ್ಕೆ ಶ್ರೀಗಂಧವನ್ನು ಪೂರೈಸುವ ಬಗ್ಗೆ ಮಂಜೂರಾತಿ ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸರ್ಕಾರವು ಅಪಜಿ 38 ಎಫ್‌ಎಸ್‌ಡಬ್ಲ್ಯೂ 2003ರ ದಿನಾಂಕ 3ನೇ ಡಿಸೆಂಬರ್ 2003ರಲ್ಲಿ ನಿಗಧಿಗೊಳಿಸಿದ್ದ ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು ಪರಿಷ್ಕರಿಸಿ ಮರುನಿಗಧಿಪಡಿಸಲಾಗಿದೆ.

ಮೇಲೆ (4)ರಲ್ಲಿ ಓದಲಾಗಿರುವ ಪತ್ರದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ), ಬೆಂಗಳೂರು ಇವರು ದಿನಾಂಕ 3ನೇ ಡಿಸೆಂಬರ್ 2003ರ ಆದೇಶದಲ್ಲಿ ನಿಗಧಿಗೊಳಿಸಿದ್ದ ದರದ ಶೇಕಡಾ 50ರಷ್ಟು ರಿಯಾಯಿತಿ ದರದಲ್ಲಿ ಶ್ರೀಗಂಧದ ಕರಕುಶಲ ಕರ್ಮಿಗಳ ಉಪಯೋಗಕ್ಕಾಗಿ ಶ್ರೀಗಂಧವನ್ನು ಪೂರೈಸಲು ಆದೇಶ ನೀಡಲಾಗಿದ್ದು, ಅದರಲ್ಲಿ ಕಾಲಕಾಲಕ್ಕೆ ನಿಗಧಿಪಡಿಸಲಾಗುವ ಚಿಲ್ಲರೆ ಮಾರಾಟ ದರದಲ್ಲಿ ಶೇಕಡಾ 50ರಷ್ಟು ರಿಯಾಯಿತಿ ನೀಡಿ ಸರಬರಾಜು ಮಾಡಬೇಕು ಎಂದು ಬರೆದಿದ್ದಾಗ ಮಾತ್ರ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮಕ್ಕೆ ಸರಬರಾಜು ಮಾಡಲಾಗುವ ಎಲ್ಲಾ ಶ್ರೀಗಂಧಕ್ಕೂ ಅನ್ವಯ ಆಗಬಹುದಾಗಿತ್ತು. ಪ್ರಸ್ತುತ ಸ್ಥಿತಿಯಲ್ಲಿ ದಿನಾಂಕ: 03.12.2003ರ ಆದೇಶದನ್ವಯ ಶೇ. 50 ರಷ್ಟು ರಿಯಾಯಿತಿ ನೀಡಲು ಬರುವುದಿಲ್ಲವೆಂದು ಅಭಿಪ್ರಾಯ ಪಟ್ಟು ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮಕ್ಕೆ ಯಾವ ದರದಲ್ಲಿ ಶ್ರೀಗಂಧವನ್ನು ಪೂರೈಸಬೇಕೆಂಬ ಬಗ್ಗೆ ಸ್ಪಷ್ಟೀಕರಣ ಕೋರಿರುವರು. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 42 ಎಫ್‌ಎಸ್‌ಡಬ್ಲ್ಯೂ 2004, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ), ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧದ ಡಿಪೋ / ಶ್ರೀಗಂಧದ ಕೋಠಿಗಳಲ್ಲಿ

ಲಭ್ಯವಿರುವ ದಿನಾಂಕ 26ನೇ ಫೆಬ್ರವರಿ 2004ರ ಆದೇಶದಲ್ಲಿ ವಿವರಿಸಿರುವ ವರ್ಗದ ಶ್ರೀಗಂಧವನ್ನು ಸರ್ಕಾರವು ದಿನಾಂಕ 4ನೇ ಜುಲೈ 2005ರಂದು ನಿಗಧಿಪಡಿಸಿರುವ ಚಿಲ್ಲರೆ ಮಾರಾಟ ದರಗಳ ಶೇಕಡಾ 50ರಷ್ಟು ರಿಯಾಯಿತಿ ದರದಲ್ಲಿ ರಾಜ್ಯದಲ್ಲಿರುವ ಶ್ರೀಗಂಧದ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ವಿತರಿಸುವ ಸಲುವಾಗಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಪೂರೈಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 265

**ಕೆ.ವಿ. ಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ನೀಡುವ ಬಗ್ಗೆ.

**ಓದಲಾಗಿದೆ:**
1) ಆದೇಶ ಸಂಖ್ಯೆ ಸಿಆಸುಇ 27 ಎಸ್‌ಇಎನ್ 2002, ದಿನಾಂಕ 25.09.2004.
2) ಮಹಾಲೇಖಪಾಲರ ಪತ್ರ ಸಂಖ್ಯೆ GE VIII / P. 10 Vol. III / 1042-43, ದಿನಾಂಕ 24.11.2005.
3) ಮಹಾಲೇಖಪಾಲರ ಪತ್ರ ಸಂಖ್ಯೆ PVXI / R3 / R. 9866 985, ದಿನಾಂಕ 01.12.2005.
4) ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಪ್ರಧಾನ ಇಂಜಿನಿಯರ್, ಇವರ ಪತ್ರ ದಿನಾಂಕ: 26.12.2005.

**ಪ್ರಸ್ತಾವನೆ:**

ಶ್ರೀ ಶೆಟ್ಟಿಗುಂಡಪ್ಪ, ಪ್ರಧಾನ ಇಂಜಿನಿಯರ್ ಇವರು ದಿನಾಂಕ: 30.06.2002ರಂದು ಸೇವೆಯಿಂದ ವಯೋನಿವೃತ್ತಿ ಹೊಂದಿದ್ದಾರೆ. ಅಧಿಕಾರಿಯು ನಿವೃತ್ತಿ ಹೊಂದಿದ ಸಮಯದಲ್ಲಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿದ್ದ ಕಾರಣ, ನಿವೃತ್ತ ಅಧಿಕಾರಿಗೆ ಕೇವಲ ತಾತ್ಕೂರ್ವಿಕ ವಿಶ್ರಾಂತಿ ವೇತನವನ್ನು ಮಾತ್ರ ಬಿಡುಗಡೆಗೊಳಿಸಿ ಉಳಿದ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯಲಾಗಿತ್ತು. ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ನಿವೃತ್ತ ಅಧಿಕಾರಿಯ ವಿರುದ್ಧ ಬಾಕಿಯಿದ್ದ ಇಲಾಖಾ ವಿಚಾರಣೆಯಲ್ಲಿ ನಿವೃತ್ತ ಅಧಿಕಾರಿಯನ್ನು ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸಲಾಗಿದೆ. ಅದರನ್ವಯ ನಿವೃತ್ತ ಅಧಿಕಾರಿಯ ತಡೆಹಿಡಿಯಲಾದ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸುವಂತೆ ದಿನಾಂಕ: 21.11.2005 ರಂದು ಮಹಾಲೇಖಪಾಲರಿಗೆ ತಿಳಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ: (2) ಮತ್ತು (3)ರಲ್ಲಿ ಓದಲಾದ ಮಹಾಲೇಖಪಾಲರ ಪತ್ರದಲ್ಲಿ ನಿವೃತ್ತ ಅಧಿಕಾರಿಗೆ ತಡೆಹಿಡಿಯಲಾದ ನಿವೃತ್ತಿ ನಂತರದ ಗಳಿಕೆ ರಜೆ ನಗದೀಕರಣ ಬಾಬ್ತು ರೂ. 1,83,568-00 ಮತ್ತು ಉಪದಾನ ರೂ. 2,50,000-00 ಗಳನ್ನು ಬಿಡುಗಡೆಗೊಳಿಸಲಾಗಿದೆ. ಕ್ರಮಸಂಖ್ಯೆ (4)ರ ಪತ್ರದಲ್ಲಿ ನಿವೃತ್ತ ಅಧಿಕಾರಿಯು ತಮಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳಿಗೆ ದಿನಾಂಕ: 01.07.2002 ರಿಂದ ಶೇ. 12ರಂತೆ ಬಡ್ಡಿಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: 04 ಸೇಇಮು 2006, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2006.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತ ಸೌಲಭ್ಯಗಳಿಗೆ ರೂ. 1,22,331-00 (ಒಂದು ಲಕ್ಷದ ಇಪ್ಪತ್ತೆರಡು ಸಾವಿರದ ಮೂರು ನೂರು ಮೂವತ್ತೊಂದು ರೂಪಾಯಿಗಳು ಮಾತ್ರ) ಬಡ್ಡಿಯನ್ನು ಪಾವತಿಸಲು ಈ ಕೆಳಕಂಡ ಲೆಕ್ಕಾಚಾರ ಹಾಕಿ ಮಂಜೂರಾತಿ ನೀಡಲಾಗಿದೆ.

| | |
|---|---|
| (ಅ) ಉಪದಾನ : ರೂ. 2,50,000-00 | |
| ದಿನಾಂಕ: 01.10.2002 ರಿಂದ 20.08.2003 ವರೆಗೆ ಶೇ. 12 ರಂತೆ (10 ತಿಂಗಳು 20 ದಿನಗಳು) | ರೂ. 26,612-90 |
| ದಿನಾಂಕ: 21.08.2003 ರಿಂದ 31.10.2005 ವರೆಗೆ ಶೇ. 8 ರಂತೆ (26 ತಿಂಗಳು 11 ದಿನಗಳು) | ರೂ. 43,924-55 |
| ಒಟ್ಟು | ರೂ. 70,537-45 |
| (ಆ) ನಿವೃತ್ತಿ ನಂತರದ ಗಳಿಕೆ ರಜೆ ನಗಧೀಕರಣ ರೂ. 1,83,568-00 | |
| ದಿನಾಂಕ: 01.10.2002 ರಿಂದ 20.08.2003 ವರೆಗೆ ಶೇ. 12 ರಂತೆ (10 ತಿಂಗಳು 20 ದಿನಗಳು) | ರೂ. 19,541-00 |
| ದಿನಾಂಕ: 21.08.2003 ರಿಂದ 31.10.2005 ವರೆಗೆ ಶೇ. 8 ರಂತೆ (26 ತಿಂಗಳು 11 ದಿನಗಳು) | ರೂ. 32,252-52 |
| ಒಟ್ಟು | ರೂ. 51,793-52 |

(ಅ) ರೂ. 70,517-45
(ಆ) ರೂ. 51,793-52
ರೂ. 1,22,330-97 or 1,22,331-00

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ(ವಿ) 68/06(ಎ) (ಸಿನಂ. 56065) ದಿನಾಂಕ: 18.01.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 257

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).